KA / BG-GPO / 2515 / WPP-47 / 2006-2008



# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**



| ಸಂಪುಟ ೧೪೩ | ಬೆಂಗಳೂರು, ಗುರುವಾರ, ಮೇ ೧೫, ೨೦೦೮ (ವೈಶಾಖ ೨೫, ಶಕ ವರ್ಷ ೧೯೩೦) | ಸಂಚಿಕೆ ೨೦ |
|---|---|---|



## ಭಾಗ – ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು

**ಅರಣ್ಯ ಇಲಾಖೆ**

**ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ವಿಭಾಗ, ಅರಣ್ಯ ಭವನದ ಪಕ್ಕದ ಕಟ್ಟಡ, 18ನೇ ಅಡ್ಡರಸ್ತೆ. ಮಲ್ಲೇಶ್ವರಂ, ಬೆಂಗಳೂರು**

**ಸಂಕ್ಷಿಪ್ತ ಟೆಂಡರ್ ಪ್ರಕಟಣೆ**

**ಸಂಖ್ಯೆ: ಎ2/ಉಅಸಂ(ಬೆಂಗ್ರಾ)/ಬಿಯುಡಿ/ವಿವ–53/07–08, ದಿನಾಂಕ: 07ನೇ ಮೇ 2008**

**ವಿಷಯ:–** 2008–09ನೇ ಸಾಲಿನಲ್ಲಿ ಬಯಲು ಸೀಮೆ ಪ್ರದೇಶಾಭಿವೃದ್ಧಿ ಮಂಡಳಿಯ ಕಾಮಗಾರಿಗಳನ್ನು ಕೈಗೊಳ್ಳುವ ಕುರಿತು.

**ಉಲ್ಲೇಖ:–**
1. ಅರಣ್ಯ ಸಂರಕ್ಷಣಾಧಿಕಾರಿಗಳು, ಬೆಂಗಳೂರು ವೃತ್ತ, ಬೆಂಗಳೂರು ಇವರ ಅಧಿಕೃತ ಜ್ಞಾಪನ ಪತ್ರ ಸಂಖ್ಯೆ: ಎ2(ಎ)/ಬ.ಸೀ.ಪ್ರ.ಸಿಆರ್–89/07–08 ದಿನಾಂಕ:03–03–2008.
2. ಕಾರ್ಯದರ್ಶಿರವರು, ಬಯಲು ಸೀಮೆ ಪ್ರದೇಶಾಭಿವೃದ್ಧಿ ಮಂಡಳಿ ರವರ ಕಛೇರಿ ಪತ್ರ ಸಂಖ್ಯೆ: ಬಸೀಪ್ರಮಂ/ ಯೋಶಾ/ತಾಂ–6/ಸವಿನಿ/07–08/2164 ದಿನಾಂಕ 18/21–01–2008.

2008–09ನೇ ಸಾಲಿನಲ್ಲಿ ದೇವನಹಳ್ಳಿ ವಲಯದ ಭುವನಹಳ್ಳಿಯಲ್ಲಿ ಹೊಸದಾಗಿ ನರ್ಸರಿ ಅಭಿವೃದ್ಧಿ ಪಡಿಸುವ ಸಂಬಂಧ ಕಾಮಗಾರಿಗಳನ್ನು ಕೈಗೊಳ್ಳಲು ಈ ವಿಭಾಗದಲ್ಲಿ ನೊಂದಾಯಿತರಾಗಿರುವ ಅರಣ್ಯ ಗುತ್ತಿಗೆದಾರರಿಂದ ಟೆಂಡರನ್ನು ದಿನಾಂಕ 24–05–2008 ರಂದು ಮತ್ತು 28–05–2008 ರಂದು ಟೆಂಡರನ್ನು ಕರೆಯಲಾಗಿದೆ. ಟೆಂಡರನ್ನು ದಿನಾಂಕ 24–05–2008 ರಂದು ಅಪರಾಹ್ನ 1.30 ಗಂಟೆಯವರೆಗೆ ಸ್ವೀಕರಿಸಲಾಗುವುದು. ಒಂದು ವೇಳೆ ದಿನಾಂಕ 24–05–2008 ರಂದು ನಡೆಯುವ ಟೆಂಡರಿನಲ್ಲಿ ಯಾವುದೇ ಅರಣ್ಯ ಗುತ್ತಿಗೆದಾರರು ಭಾಗವಹಿಸದೇ ಇದ್ದಲ್ಲಿ ಇದನ್ನೇ ಮರು ಟೆಂಡರ್ ಪ್ರಕಟಣೆ ಎಂದು ತಿಳಿದು ದಿನಾಂಕ 28–05–2008 ರಂದು ಅಪರಾಹ್ನ 1.30 ಗಂಟೆಯವರೆಗೆ ಮೊಹರಾದ ಟೆಂಡರ್‌ಗಳನ್ನು ಸ್ವೀಕರಿಸಲಾಗುವುದು. ಟೆಂಡರ್ ಫಾರಂಗಳನ್ನು ದಿನಾಂಕ 24–05–2008 ರಂದು ಮತ್ತು 28–05–2008 ರಂದು ಕಛೇರಿ ಕೆಲಸದ ವೇಳೆಯಲ್ಲಿ ಅಂದರೆ ಬೆಳಿಗ್ಗೆ 10.30 ಗಂಟೆಯಿಂದ ಮಧ್ಯಾಹ್ನ 1 ಗಂಟೆಯವರೆಗೆ ಈ ಕಛೇರಿಯಿಂದ ಪಡೆಯಬಹುದಾಗಿದೆ. ಕೆಲಸದ ವಿವರ ಈ ಕೆಳಗೆ ನೀಡಲಾಗಿರುವ ಷೆಡ್ಯೂಲ್‌ನಂತಿರುತ್ತವೆ.

**ಷೆಡ್ಯೂಲ್**

| ಕ್ರ. ಸಂ. | ಸ್ಥಳ | ಕೆಲಸದ ವಿವರ | 2007–08ನೇ ಸಾಲಿಗೆ ಮಂಜೂರಾದ ದರ | ಅಂದಾಜು ಮೊತ್ತ (ರೂ. ಲಕ್ಷಗಳಲ್ಲಿ) | ಇ.ಎಂ.ಡಿ. (ಇಡಿಗಂಟು ರೂ.) |
|---|---|---|---|---|---|
| 1 | ದೇವನಹಳ್ಳಿ ವಲಯದ ಭುವನಹಳ್ಳಿ | ದೇವನಹಳ್ಳಿ ವಲಯದ ಭುವನಹಳ್ಳಿ ಹತ್ತಿರ ಹೊಸದಾಗಿ ಬೋರ್‌ವೆಲ್ ಕೊರೆಯುವ ಕಾಮಗಾರಿ. | ಪಂಚಾಯತ್ ರಾಜ್ ಇಂಜಿನೀಯರಿಂಗ್ ವಿಭಾಗದ ದರಗಳು | 100600.00 | 6036.00 |

| ಕ್ರ. ಸಂ. | ಸ್ಥಳ | ಕೆಲಸದ ವಿವರ | 2007–08ನೇ ಸಾಲಿಗೆ ಮಂಜೂರಾದ ದರ | ಅಂದಾಜು ಮೊತ್ತ (ರೂ. ಲಕ್ಷಗಳಲ್ಲಿ) | ಇ.ಎಂ.ಡಿ. (ಇಡಿಗಂಟು ರೂ.) |
|---|---|---|---|---|---|
| 2 | ದೇವನಹಳ್ಳಿ ವಲಯದ ಭುವನಹಳ್ಳಿ | ಹೊಸದಾಗಿ ಕೊರೆಯುವ ಬೋರ್‌ವೆಲ್‌ಗೆ ಪಂಪ್ ಮತ್ತು ಮೋಟಾರ್ ಅಳವಡಿಸುವುದು. | ಪಂಚಾಯತ್ ರಾಜ್ ಇಂಜಿನೀಯರಿಂಗ್ ವಿಭಾಗದ ದರಗಳು | 38410.00 | 960.00 |
| 3 | ದೇವನಹಳ್ಳಿ ವಲಯದ ಭುವನಹಳ್ಳಿ | ಹೊಸದಾಗಿ ಕೊರೆಯುವ ಬೋರ್‌ವೆಲ್‌ಗೆ ವಿದ್ಯುತ್ ಶಕ್ತಿ ಕಾಮಗಾರಿ ಕೈಗೊಳ್ಳುವುದು. | ಪಂಚಾಯತ್ ರಾಜ್ ಇಂಜಿನೀಯರಿಂಗ್ ವಿಭಾಗದ ದರಗಳು | 98366.50 | 2460.00 |
| 4 | ದೇವನಹಳ್ಳಿ ವಲಯದ ಭುವನಹಳ್ಳಿ | ಹೊಸದಾಗಿ ಕೊರೆಯುವ ಬೋರ್‌ವೆಲ್‌ಗೆ ಎಂ.ಎಸ್.ಟ್ಯೂಬ್ ಅಳವಡಿಸುವುದು. | ಪಂಚಾಯತ್ ರಾಜ್ ಇಂಜಿನೀಯರಿಂಗ್ ವಿಭಾಗದ ದರಗಳು | 81043.00 | 2026.00 |
| 5 | ದೇವನಹಳ್ಳಿ ವಲಯದ ಭುವನಹಳ್ಳಿ | ಹೊಸದಾಗಿ ನಿರ್ಮಿಸುತ್ತಿರುವ ನರ್ಸರಿ ಸುತ್ತಾ ಬಾರ್ಬಡ್ ವೈರ್ ಬೇಲಿ ನಿರ್ಮಿಸುವುದು. | ಅರಣ್ಯ ಇಲಾಖಾ ದರಗಳು | 94150.00 | 2354.00 |
| 6 | ದೇವನಹಳ್ಳಿ ವಲಯದ ಭುವನಹಳ್ಳಿ | ಹೊಸದಾಗಿ ನಿರ್ಮಿಸಿರುವ ನರ್ಸರಿಯಲ್ಲಿ 50,000 5"x8" ಗಾತ್ರ ಸಸಿಗಳನ್ನು ಬೆಳೆಸುವುದು. | ಅರಣ್ಯ ಇಲಾಖಾ ದರಗಳು | 85801.00 | 2145.00 |

**ನಿಬಂಧನೆಗಳು**

1. ಟೆಂಡರ್‌ದಾರರು 2008–09ನೇ ಸಾಲಿನಲ್ಲಿ ನೋಂದಾಯಿಸಲ್ಪಟ್ಟ ಅರಣ್ಯ ಗುತ್ತಿಗೆದಾರರಾಗಿರಬೇಕು.
2. ಟೆಂಡರ್ ಫಾರಂಗಳನ್ನು ರೂ. 2.00 ಕೋರ್ಟ್ ಫೀ ಸ್ಟಾಂಪ್ ಹಚ್ಚಿದ ಹಾಗೂ ಅಂದಾಜು ವೆಚ್ಚದ ಶೇಕಡ 2.50 ಇ.ಎಂ.ಡಿ. ಹಣವನ್ನು (ಮೇಲೆ ತಿಳಿಸಿದ ರೀತ್ಯ) ಯಾವುದಾದರೂ ರಾಷ್ಟ್ರೀಕೃತ ಬ್ಯಾಂಕಿನಿಂದ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ವಿಭಾಗ, ಬೆಂಗಳೂರುರವರ ಹೆಸರಿನಲ್ಲಿ ಡಿ.ಡಿ. ಪಡೆದು ಟೆಂಡರ್ ಫಾರಂ ಜೊತೆ ಲಗತ್ತಿಸಬೇಕು.
3. ಟೆಂಡರ್ ಫಾರಂಗಳನ್ನು ಸೀಲು ಮಾಡಿದ ಲಕೋಟೆಯಲ್ಲಿಟ್ಟು ಲಕೋಟೆಯ ಮೇಲೆ ದೊಡ್ಡ ಹುಚ್ಚಯ್ಯನ ಪಾಳ್ಯ ಕೆರೆ ಅಭಿವೃದ್ಧಿ ಕಾಮಗಾರಿಗೆ ಟೆಂಡರ್ ಎಂದು ನಮೂದಿಸತಕ್ಕದ್ದು.
4. ಟೆಂಡರ್ ಫಾರಂಗಳನ್ನು ಈ ಕಛೇರಿಯಿಂದ ಟೆಂಡರ್ ಪ್ರಕಟಣೆಯಲ್ಲಿ ತಿಳಿಸಿರುವಂತೆ ಆಯಾ ದಿನಾಂಕಗಳಂದು ಕಛೇರಿ ವೇಳೆಯಲ್ಲಿ ಕೊಡಲಾಗುವುದು ಟೆಂಡರ್ ಫಾರಂನ ಬೆಲೆ ರೂ. 200/– (ತೆರಿಗೆಗಳು ಪ್ರತ್ಯೇಕ)
5. ಕೆಲಸಗಳನ್ನು ಈ ಕಛೇರಿಯಿಂದ ನೀಡಲಾಗುವ ಡ್ರಾಯಿಂಗ್ ಹಾಗೂ ವಿವರಣೆ ಮಾದರಿ ರೀತ್ಯವೇ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ವಿಭಾಗ ಇವರಿಂದ ಒಪ್ಪಿಗೆ ಪಡೆದ ನಂತರ ಕೆಲಸ ನಿರ್ವಹಿಸಬೇಕು.
6. ದಿನಾಂಕ 24–05–2008 ರಂದು ಮತ್ತು 28–05–2008 ರಂದು ಅಪರಾಹ್ನ 1.30 ಗಂಟೆ ವೇಳೆಯವರೆಗೆ ಟೆಂಡರ್‌ನ್ನು ಈ ಕಛೇರಿಯಲ್ಲಿ ಅದಕ್ಕೆಂದೇ ಇಟ್ಟಿರುವ ಟೆಂಡರ್ ಪೆಟ್ಟಿಗೆಯಲ್ಲಿ ಹಾಕಬೇಕು.
7. ದಿನಾಂಕ 24–05–2008 ರಂದು ಮತ್ತು 28–05–2008 ರಂದು ಸಂಜೆ 3 ಗಂಟೆಗೆ ಹಾಜರಿರುವ ಗುತ್ತಿಗೆದಾರರ/ಟೆಂಡರ್‌ದಾರರ ಸಮ್ಮುಖದಲ್ಲಿ ಟೆಂಡರ್‌ಗಳನ್ನು ತೆರೆಯಲಾಗುವುದು.
8. ಟೆಂಡರ್‌ಗಳನ್ನು ಒಪ್ಪಿಕೊಳ್ಳುವ ಅಥವಾ ತಿರಸ್ಕರಿಸುವ ಅಧಿಕಾರ ಬೆಂಗಳೂರು ವೃತ್ತ, ಅರಣ್ಯ ಸಂರಕ್ಷಣಾಧಿಕಾರಿಗಳಿಗೆ ಇರುತ್ತದೆ. ತಿರಸ್ಕೃತ ಟೆಂಡರ್‌ಗಳಿಗೆ ಕಾರಣ ನೀಡಲಾಗುವುದಿಲ್ಲ.
9. ಯಶಸ್ವಿ ಟೆಂಡರ್‌ದಾರರು ಕೆಲಸದ ಆದೇಶ ಕೊಟ್ಟ ಮೂರು ದಿನಗಳೊಳಗೆ ಈ ಕಛೇರಿಯಲ್ಲಿ ರೂ. 200/–ರ ಛಾಪಾ ಕಾಗದದ ಮೇಲೆ ಕರಾರು ಮಾಡಿಕೊಟ್ಟು ಕೆಲಸದ ಆದೇಶ ಪಡೆಯುವುದು. ಬಾಕಿ ವಿವರಗಳಿಗೆ ಈ ಕಛೇರಿಯ ವಿವರವಾದ ಟೆಂಡರ್ ಪ್ರಕಟಣೆಯನ್ನು ಟೆಂಡರ್ ದಿನಾಂಕದಂದು ಪಡೆಯಬಹುದು.
10. ವಿವರವಾದ ಟೆಂಡರ್ ಷರತ್ತುಗಳನ್ನು ಕಛೇರಿ ವೇಳೆಯಲ್ಲಿ ಕಛೇರಿಗೆ ಬಂದು ಪಡೆದುಕೊಳ್ಳುವುದು.

ಉಪ ಅರಣ್ಯ ಸಂರಕ್ಷಣಾಧಿಕಾರಿ
ಪಿ.ಆರ್. 276 ಬೆಂಗಳೂರು ಗ್ರಾಮಾಂತರ ವಿಭಾಗ
ಬೆಂಗಳೂರು

**ಉಪ ಅರಣ್ಯ ಸಂರಕ್ಷಣಾಧಿಕಾರಿಯವರ ಕಛೇರಿ, ಅರಣ್ಯ ಸಂಚಾರಿ ದಳ, 18ನೇ ಕ್ರಾಸ್, ಮಲ್ಲೇಶ್ವರಂ, ಬೆಂಗಳೂರು–560003**

**ಬಹಿರಂಗ ಹರಾಜು ಪ್ರಕಟಣೆ**

**ಸಂಖ್ಯೆ:ಎ2/ಅಅಮೊ/ಹಪ್ರ.ವಾ/ಪಿ.ಆರ್ /07–08, ದಿನಾಂಕ: 5ನೇ ಮೇ 2008**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ 1963ರ ಕರ್ನಾಟಕ ಅರಣ್ಯ ಕಾಯ್ದೆ ವಿಧಿ 71ಎ ಪ್ರಕಾರ ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲಾದ ವಾಹನ ಹಾಗೂ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ನಿರುಪಯುಕ್ತಗೊಳಿಸಿದ ಈ ಕೆಳಕಂಡ ವಾಹನಗಳನ್ನು ಅವುಗಳು ಎಲ್ಲಿವೆಯೋ ಅಲ್ಲಿ, ಹೇಗಿವೆಯೋ ಹಾಗೆ ಸ್ಥಿತಿಯಲ್ಲಿ ದಿನಾಂಕ:30.05.2008 ರಂದು

ಬೆಳಿಗ್ಗೆ:11.00 ಗಂಟೆಗೆ ಜಾರಕಬಂಡೆ ಕಾವಲು ಅರಣ್ಯ ಸಂಕೀರ್ಣ, ಬೆಂಗಳೂರು ರಲ್ಲಿ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಅರಣ್ಯ ಸಂಚಾರಿ ದಳ, ಬೆಂಗಳೂರು ರವರು ಅಥವಾ ಇವರಿಂದ ಅಧಿಕಾರ ಪಡೆದ ಅಧಿಕಾರಿಗಳು ಬಹಿರಂಗ ಹರಾಜು ಮೂಲಕ ಮಾರಾಟ ಮಾಡುತ್ತಾರೆ. ಇಷ್ಟವುಳ್ಳ ಬಿಡ್ಡುದಾರರು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಬಹಿರಂಗ ಹರಾಜಿನಲ್ಲಿ ಪಾಲುಗೊಳ್ಳಬಹುದು.

| ಕ್ರ. ಸಂ. | ವಾಹನ ಸಂಖ್ಯೆ | ಮಾದರಿ / ವಿವರ | ವಾಹನ ಇರುವ ಸ್ಥಳ |
|---|---|---|---|
| 1 | KL-11-F-783 | 1996 – ಲಾರಿ<br>ಚಾಸಿ ಸಂಖ್ಯೆ:RXE-380303<br>ಇಂಜಿನ್ ಸಂಖ್ಯೆ: RXE-268081<br>ಮುಟ್ಟುಗೋಲು ಹಾಕಿಕೊಂಡ<br>ದಿನಾಂಕ:26.07.2007 | ಜಾರಕಬಂಡೆ ಕಾವಲು ಅರಣ್ಯ ಸಂಕೀರ್ಣ, ಬೆಂಗಳೂರು. |
| 2 | KA-01-B-9577 | 1998 – ಲಾರಿ<br>ಚಾಸಿ ಸಂಖ್ಯೆ:VSE-411042<br>ಇಂಜಿನ್ ಸಂಖ್ಯೆ: VSE-301976<br>ಮುಟ್ಟುಗೋಲು ಹಾಕಿಕೊಂಡ<br>ದಿನಾಂಕ:26.07.2007 | ಜಾರಕಬಂಡೆ ಕಾವಲು ಅರಣ್ಯ ಸಂಕೀರ್ಣ, ಬೆಂಗಳೂರು. |
| 3 | KA-01-G-77 | 2000 – ಟೆಂಪೋ ಟ್ರಾಕ್ಸ್ ಸವಕಳಿ (Scrap) | ಜಾರಕಬಂಡೆ ಕಾವಲು ಅರಣ್ಯ ಸಂಕೀರ್ಣ, ಬೆಂಗಳೂರು. |

ಹೆಚ್ಚಿನ ವಿವರಗಳು ಅವಶ್ಯವಿದ್ದಲ್ಲಿ ಈ ಕಛೇರಿಯ ಕರ್ತವ್ಯದ ವೇಳೆಯಲ್ಲಿ (ರಜಾ ದಿನ ಹೊರತುಪಡಿಸಿ) ಪಡೆಯಬಹುದಾಗಿರುತ್ತದೆ.

**ಹರಾಜಿನ ಷರತ್ತುಗಳು**

1. ಹರಾಜಿನಲ್ಲಿ ಭಾಗವಹಿಸಲು ಇಚ್ಛಿಸುವವರು ಹರಾಜು ಪ್ರಾರಂಭವಾಗುವ ಮುನ್ನ ವಾಹನ ನಿಲ್ಲಿಸಿರುವ ಆವರಣದಲ್ಲಿ ವಾಹನವನ್ನು ಪರೀಕ್ಷಿಸಿ ತಪಾಶಿಸಿಕೊಂಡು ಇಚ್ಛೆ ಇದ್ದಲ್ಲಿ ಹರಾಜಿನಲ್ಲಿ ಭಾಗವಹಿಸಬಹುದಾಗಿರುತ್ತದೆ. ವಾಹನವು ಎಲ್ಲಿವೆಯೋ ಅಲ್ಲಿ, ಹೇಗಿವೆಯೋ ಹಾಗೆ ಇರುವ ಆಧಾರದ ಮೇಲೆ ಹರಾಜು ಮಾಡಲಾಗುವುದು. ಹರಾಜು ಮುಗಿದ ನಂತರ ಯಾವ ದೂರನ್ನು ಪರಿಗಣಿಸುವುದಿಲ್ಲ.
2. ಬಿಡ್ಡುದಾರರು ವಾಹನವನ್ನು ಎಲ್ಲಿದೆಯೋ ಅಲ್ಲಿ, ಹೇಗಿದೆಯೋ ಹಾಗೆ ಸ್ಥಿತಿಯಲ್ಲಿ ಪರಿಶೀಲಿಸಿದ್ದಾರೆಂದು ಭಾವಿಸಲಾಗುವುದು.
3. ಹರಾಜಿನಲ್ಲಿ ಭಾಗವಹಿಸುವ ಪ್ರತಿಯೊಬ್ಬರು ಹರಾಜಿನ ಮುನ್ನ ರೂ.10,000–00 ಗಳನ್ನು ಇ.ಎಂ.ಡಿ ಯಾಗಿ ನಗದು ಅಥವಾ ಈ ಕಛೇರಿ ಹೆಸರಿನಲ್ಲಿ ಡಿ.ಡಿ. ರೂಪದಲ್ಲಿ ಸಲ್ಲಿಸಬೇಕಾಗಿರುತ್ತದೆ. ಇ.ಎಂ.ಡಿ. ಮೊತ್ತವನ್ನು ಪಾವತಿಸಿದವರು ಮಾತ್ರ ಹರಾಜಿನಲ್ಲಿ ಭಾಗವಹಿಸಲು ಅವಕಾಶವಿರುತ್ತದೆ. ಇ.ಎಂ.ಡಿ. ಯನ್ನು ಪಾವತಿಸಿರುವ ಬಿಡ್ಡುದಾರರು ಹರಾಜಿನಲ್ಲಿ ಯಶಸ್ವಿಯಾದಲ್ಲಿ ಅಂತಹವರ ಮೊತ್ತವನ್ನು ವಾಹನದ ಹರಾಜಿನ ಮೊತ್ತಕ್ಕೆ ಜಮಾ ಮಾಡಿಕೊಳ್ಳಲಾಗುವುದು.
4. ಹರಾಜು ಮುಗಿದ ತಕ್ಷಣ ಹರಾಜಿನ ನಂತರ ಯಶಸ್ವಿ ಬಿಡ್ಡುದಾರರು ಹರಾಜಿನಲ್ಲಿ ಕೂಗಿರುವ ಮೊತ್ತ ಹಾಗೂ ಚಾಲ್ತಿಯಲ್ಲಿರುವ ಎಲ್ಲಾ ತೆರಿಗೆಗಳನ್ನು ಸಹಾ ಪಾವತಿಸಬೇಕಾಗಿರುತ್ತದೆ. ತಪ್ಪಿದಲ್ಲಿ ಹರಾಜಿಗೆ ಭಾಗವಹಿಸಲು ಕಟ್ಟಿರುವ ಇ.ಎಂ.ಡಿ. ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಮರು ಹರಾಜನ್ನು ಮೂಲ ಬಿಡ್ಡುದಾರರ ಜವಾಬ್ದಾರಿಯ ಮೇಲೆ ಮರು ಹರಾಜು ಮಾಡಲಾಗುವುದು. ತಪ್ಪಿತಸ್ಥರು ಮರು ಹರಾಜಿನಲ್ಲಿ ಆದಂತಹ ಲುಕ್ಸಾನನ್ನು ತುಂಬಿಕೊಡಲು ಜವಾಬ್ದಾರರಾಗಿರುತ್ತಾರೆ. ಹಾಗೂ ಮರು ಹರಾಜಿನಲ್ಲಿ ಭಾಗವಹಿಸಲು ಅವಕಾಶವಿರುವುದಿಲ್ಲಾ.
5. ಹರಾಜನ್ನು ಸ್ವೀಕರಿಸುವ ಅಥವಾ ತಿರಸ್ಕರಿಸುವ ಅಥವಾ ಮುಂದೂಡುವ ಹಕ್ಕು ಈ ಕೆಳ ಸಹಿದಾರರಿಗೆ ಇರುತ್ತದೆ. ಅಲ್ಲದೇ ಈ ಕೆಳ ಸಹಿದಾರರಾಗಲಿ ಅಥವಾ ಈ ಕಛೇರಿಯಿಂದ ಅನುಮೋದಿಸಲ್ಪಟ್ಟ ಅಧಿಕಾರಿಯವರು ವಾಹನ ಹರಾಜನ್ನು ಮಾಡಬಹುದಾಗಿರುತ್ತದೆ.
6. ಯಶಸ್ವಿ ಬಿಡ್ಡುದಾರರು ಪೂರ್ಣ ಮೊಬಲಗನ್ನು ಪಾವತಿಸಿ ವಾಹನವನ್ನು ತೆಗೆದುಕೊಂಡು ಹೋಗಬೇಕಾಗಿರುತ್ತದೆ. ಒಂದು ವೇಳೆ ವಿಳಂಬ ಮಾಡಿದ್ದಲ್ಲಿ ವಿಳಂಬದ ಅವಧಿಗೆ ಸಂಬಂಧಿಸಿದವರು ನೆಲ ಬಾಡಿಗೆಯನ್ನು ಕಟ್ಟಬೇಕಾಗಿರುತ್ತದೆ.
7. ಹರಾಜಿನಲ್ಲಿ ವಾಹನವನ್ನು ಕೊಂಡವರು ತಮ್ಮ ಸ್ವಂತ ಖರ್ಚು ಮತ್ತು ಜವಾಬ್ದಾರಿಯಲ್ಲಿ ವಾಹನಗಳ ಮಾಲೀಕತ್ವದ ಬದಲಾವಣೆಯನ್ನು ಮಾಡಿಕೊಳ್ಳತಕ್ಕದ್ದು. (ಮಾಲೀಕತ್ವ ಬದಲಾವಣೆಗೆ ಸಂಬಂಧಪಟ್ಟ ಅಗತ್ಯ ನಮೂನೆಗಳನ್ನು ಒದಗಿಸಿ ಸಹಿ ಪಡೆದುಕೊಳ್ಳುವುದು) ಹಾಗೂ ಯಶಸ್ವಿ ಬಿಡ್ಡುದಾರರಿಗೆ ಅಂಗೀಕಾರದ ಸಂಬಂಧ ಅಂಚೆ ಮೂಲಕ ತಿಳಿಯಪಡಿಸಲಾಗುವುದು.

8. ಹರಾಜು ಮಂಜೂರಾತಿಯಾದ 30 ದಿವಸದ ಒಳಗಾಗಿ ಬಿಡ್ಡುದಾರರು ಬಾಕಿ ಉಳಿದ ಮೊತ್ತವನ್ನು ಪೂರ್ಣವಾಗಿ ಪಾವತಿಸಿ ವಾಹನಗಳನ್ನು ತಮ್ಮ ವಶಕ್ಕೆ ತೆಗೆದುಕೊಳ್ಳತಕ್ಕದ್ದು. ಬಿಡ್ಡುದಾರರು ವಾಹನವನ್ನು ನಿಗಧಿಪಡಿಸಿದ ಅವಧಿಯಲ್ಲಿ ತೆಗೆದುಕೊಂಡು ಹೋಗದಿದ್ದ ಪಕ್ಷದಲ್ಲಿ ಕಳ್ಳತನ, ಬೆಂಕಿ ಹಾಗೂ ಇತರೆ ಯಾವುದೇ ನಷ್ಟಕ್ಕೆ ಒಳಗಾದಲ್ಲಿ ಇಲಾಖೆ ಜವಾಬ್ದಾರರಾಗಿರುವುದಿಲ್ಲ.
9. ವಾಹನಗಳ ಹರಾಜಿನ ಬಗ್ಗೆ ಇಲಾಖೆ ತೀರ್ಮಾನವೇ ಅಂತಿಮ ತೀರ್ಮಾನವಾಗಿರುತ್ತದೆ.

**ಆಂಜನೇಯ ರೆಡ್ಡಿ .ಬಿ**
ಉಪ ಅರಣ್ಯ ಸಂರಕ್ಷಣಾಧಿಕಾರಿ,
ಅರಣ್ಯ ಸಂಚಾರಿ ದಳ, ಬೆಂಗಳೂರು.

ಪಿ.ಆರ್. 278

**ಕರ್ನಾಟಕ ಮೃಗಾಲಯ ಪ್ರಾಧಿಕಾರ**

**ಕಾರ್ಯನಿರ್ವಾಹಕ ನಿರ್ದೇಶಕರ ಕಛೇರಿ, ಬನ್ನೇರುಘಟ್ಟ ಬಯಲಾಜಿಕಲ್ ಪಾರ್ಕ್, ಬೆಂಗಳೂರು – 83**

**ಅಲ್ಪಾವಧಿ ಟೆಂಡರು ಪ್ರಕಟಣೆ**

**ಸಂಖ್ಯೆ:ಎ1–ಬಬಪಾ–ಫೀಡ್–ಸಿಆರ್–1/2008–2009, ದಿನಾಂಕ: 10ನೇ ಮೇ 2008**

ಕೆಳಗೆ ನಮೂದಿಸಿರುವಂತೆ ವಿವಿಧ ಸಾಮಾಗ್ರಿಗಳಿಗೆ ಈ ಕಛೇರಿಯಲ್ಲಿ ನೊಂದಾಯಿಸುವ ಸರಬರಾಜುದಾರರಿಂದ 2008–09ನೇ ಸಾಲಿಗೆ ಟೆಂಡರ್ ಕರೆಯಲಾಗಿದೆ.

**ಷೆಡ್ಯೂಲ್**

| ಯೂನಿಟ್ ಸಂಖ್ಯೆ | ವಿವರಗಳು | ಟೆಂಡರಿನ ಅಂದಾಜು ಮೊತ್ತ (ರೂ. ಲಕ್ಷಗಳಲ್ಲಿ) | ಇ.ಎಂ.ಡಿ ಹಣ (ರೂ. ಲಕ್ಷಗಳಲ್ಲಿ) |
|---|---|---|---|
| 1. | ಮೃಗಾಲಯಕ್ಕೆ ದವಸ ಧಾನ್ಯ, ದ್ವಿದಳ ಧಾನ್ಯ, ಪಶು ಆಹಾರ ಇತ್ಯಾದಿ ಸರಬರಾಜು ಮಾಡುವುದು | 10.00 | 1.00 |
| 2. | ಮೃಗಾಲಯಕ್ಕೆ ತರಕಾರಿ, ಹಣ್ಣು, ಹಸಿರು ಹುಲ್ಲು ಇತ್ಯಾದಿ ಸರಬರಾಜು ಮಾಡುವುದು. | 12.64 | 1.26 |
| 3. | ಮೃಗಾಲಯಕ್ಕೆ ಮೀನು ಸರಬರಾಜು ಮಾಡುವುದು | 3.22 | 0.32 |
| 4. | ಸಸ್ಯಹಾರಿ ಸಫಾರಿಗೆ ಹಸಿರು ಹುಲ್ಲು, ಪಶು ಆಹಾರ ಇತ್ಯಾದಿ ಸರಬರಾಜು ಮಾಡುವುದು. | 11.34 | 1.13 |
| 5. | ಕರಡಿ ಸಫಾರಿಗೆ ಹಾಲು, ತರಕಾರಿ, ಹಣ್ಣು ಇತ್ಯಾದಿ ಸರಬರಾಜು ಮಾಡುವುದು | 2.60 | 0.26 |
| 6. | ಮೃಗಾಲಯ, ಪುನರ್ವಸತಿ ಕೇಂದ್ರ, ಸಫಾರಿಇತ್ಯಾದಿಗೆ ಕೋಳಿಮಾಂಸ, ಮೊಟ್ಟೆ ಮತ್ತು ಇನ್ನಿತರೆ ಆಹಾರ ಸಾಮಗ್ರಿಗಳನ್ನು ಸರಬರಾಜು ಮಾಡುವುದು. | 7.50 | 0.75 |

**ಷರತ್ತುಗಳು:**

1. ಪ್ರತಿಯೊಂದು ಯೂನಿಟ್‌ಗೆ ರೂ. 563/– (ತೆರಿಗೆಗಳು ಸೇರಿ) ಟೆಂಡರು ಫಾರಂನ್ನು ದಿನಾಂಕ: 07.06.2008 ರಿಂದ 09.06.2008 ರವರೆಗೆ ಪಡೆಯಬಹುದು.
2. ಟೆಂಡರು ದಿನಾಂಕ: 12.06.2008 ರಂದು 3 ಗಂಟೆಯವರೆಗೆ ಪಡೆದು ಸಂಜೆ 4.00 ಗಂಟೆಗೆ ತೆರೆಯಲಾಗುವುದು.
3. ಹೆಚ್ಚಿನ ವಿವರಗಳನ್ನು ಈ ಕಛೇರಿಯ ಕೆಲಸದ ವೇಳೆಯಲ್ಲಿ ಪಡೆಯುವುದು.

ಕಾರ್ಯನಿರ್ವಾಹಕ ನಿರ್ದೇಶಕರು
ಬನ್ನೇರುಘಟ್ಟ, ಬಯಲಾಜಿಕಲ್ ಪಾರ್ಕ್,
ಬೆಂಗಳೂರು.

ಪಿ.ಡಿ. 45

**ZOO AUTHORITY OF KARNATAKA**

**OFFICE OF THE EXECUTIVE DIRECTOR, BANNERGHATTA BIOLOGICAL PARK, BANGALORE**

**SHORT TERM TENDER NOTIFICATION**

**No.A1-BBP-Feeding-CR-1/2008-09, Dated: 10th May 2008**

Sealed tenders are invited from the suppliers to be Registered in this office for the works mentioned below for 2008-09.

**SCHEDULE**

| Unit No. | Particulars of works | Approximate cost of tender (Rs. In lakhs) | EMD (Rs. In lakhs) |
|---|---|---|---|
| 1 | Supply of food grains, pulses, cattle feed etc to the zoo | 10.00 | 1.00 |
| 2 | Supply of vegetables, fruits, green grass etc., to the zoo | 12.64 | 1.26 |

| Unit No. | Particulars of works | Approximate cost of tender (Rs. In lakhs) | EMD (Rs. In lakhs) |
|---|---|---|---|
| 3 | Supply of fish to the zoo | 3.22 | 0.32 |
| 4 | Supply of grass, cattle feed to Herbivore Safari | 11.34 | 1.13 |
| 5 | Supply of Food grains, Fruits, Vegetables etc to Bear Safari | 2.60 | 0.26 |
| 6 | Supply of chicken, eggs & other items to various facilities | 7.50 | 0.75 |

**CONDITIONS**

1. Issue of tender forms from 07.06.2008 to 09.06.2008 on payment of Rs.563/- per form (including tax) separately for each unit.
2. Submission of Tenders on 12.06.2008 up to 3:00 PM and Opening of Tenders at 4:PM
3. Other detailed conditions can be had from the above office.

Executive Director,
Bannerghatta Biological Park,
Bangalore.

P.D. 46

**ತೋಟಗಾರಿಕೆ ಇಲಾಖೆ**

**ತೋಟಗಾರಿಕೆ ಉಪನಿರ್ದೇಶಕರ ಕಚೇರಿ, ಶಿವಮೊಗ್ಗ**

**ಟೆಂಡರ್ ಹರಾಜು ಪ್ರಕಟಣೆ**

**ಸಂ.ತೋಉನಿ/ಶಿ/ತಾಸ1/117/2008–09, ದಿನಾಂಕ: 25ನೇ ಏಪ್ರಿಲ್ 2008**

ತೋಟಗಾರಿಕೆ ಉಪ ನಿರ್ದೇಶಕರು, ಗಾಂಧಿ ಪಾರ್ಕ್, ಶಿವಮೊಗ್ಗ ರವರ ಅಧೀನದಲ್ಲಿ ಬರುವ ಜಿಲ್ಲೆಯ ತೋಟಗಾರಿಕೆ ಕ್ಷೇತ್ರ/ನರ್ಸರಿಯಲ್ಲಿನ ವಿವಿಧ ಫಸಲುಗಳನ್ನು ಟೆಂಡರ್/ ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡಲು ಈ ಕೆಳಕಂಡಂತೆ ದಿನಾಂಕಗಳನ್ನು ನಿಗದಿಪಡಿಸಲಾಗಿದೆ.

| ಕ್ರ. ಸಂ. | ತೋಟಗಾರಿಕೆ ಕ್ಷೇತ್ರ/ನರ್ಸರಿಯ ಹೆಸರು | ಫಸಲಿನ | | ಟೆಂಡರ್ ಫಾರಂ ಪಡೆಯುವ ಕೊನೆಯ ದಿನಾಂಕ ಮತ್ತು ವೇಳೆ | ಟೆಂಡರ್ ಸಲ್ಲಿಸಲು ಕೊನೆಯ ದಿನಾಂಕ ಮತ್ತು ವೇಳೆ | ಟೆಂಡರ್ ತೆರೆಯುವ ದಿನಾಂಕ/ ವೇಳೆ | ಟೆಂಡರ್ ತೆರೆಯುವ ಸ್ಥಳ ಮತ್ತು ಇಎಂಡಿ ಹಾಗೂ ಟೆಂಡರ್ ಮೊತ್ತ ಕಟ್ಟುವ ಸ್ಥಳ | ಇ.ಎಂ.ಡಿ. ಮೊತ್ತ | ಟೆಂಡರ್/ ಹರಾಜು |
|---|---|---|---|---|---|---|---|---|---|
| | | ಹೆಸರು | ಅವಧಿ | | | | | | |
| 1 | ಕಛೇರಿ, ಸಸ್ಯಾಗಾರ, ಭದ್ರಾವತಿ | ತೆಂಗು | 1.1.08 ರಿಂದ 31.12.08 | 27.5.08 5.00 PM | 28.5.08 11.30 AM | 28.5.08 12.30 PM | ಸಹಾಯಕ ತೋಟಗಾರಿಕೆ ನಿರ್ದೇಶಕರು, ಕಛೇರಿ, ಭದ್ರಾವತಿ | 500/– | ಟೆಂಡರ್/ ಹರಾಜು |
| 2 | ಗಂಗನಕೊಪ್ಪ ತೋಟಗಾರಿಕೆ ಕ್ಷೇತ್ರ, ಹೊಸನಗರ | ತೆಂಗು | 1.1.08 ರಿಂದ 31.12.08 | 26.5.08 5.00 PM | 27.5.08 11.30 PM | 27.5.08 12.30 PM | ಸಹಾಯಕ ತೋಟಗಾರಿಕೆ ನಿರ್ದೇಶಕರು, ಹೊಸನಗರ | 2000/– | ಟೆಂಡರ್/ ಹರಾಜು |
| 3 | ಕುಶಾವತಿ ತೋಟಗಾರಿಕೆ ಕ್ಷೇತ್ರ, ತೀರ್ಥಹಳ್ಳಿ | ತೆಂಗು | 1.1.08 ರಿಂದ 31.12.08 | 26.5.08 5.00 PM | 27.5.08 11.30 PM | 27.5.08 12.30 PM | ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು, ತೀರ್ಥಹಳ್ಳಿ | 5000/– | ಟೆಂಡರ್/ ಹರಾಜು |
| 4 | ಕಛೇರಿ ಸಸ್ಯಾಗಾರ ಶಿಕಾರಿಪುರ | ತೆಂಗು | 1.1.08 ರಿಂದ 31.12.08 | 28.5.08 5.00 PM | 29.5.08 11.30 PM | 29.5.08 12.30 PM | ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು, ಶಿಕಾರಿಪುರ | 1000/– | ಟೆಂಡರ್/ ಹರಾಜು |

**ಟೆಂಡರ್–ಯಾ–ಬಹಿರಂಗ ಹರಾಜಿನಲ್ಲಿ ಭಾಗವಹಿಸಲು ಪಾಲಿಸಬೇಕಾದ ನಿಯಮ (ಷರತ್ತು)ಗಳು**

1. ಕ್ಷೇತ್ರಗಳ ತೆಂಗು ಫಸಲನ್ನು ಟೆಂಡರ್/ ಹರಾಜು ಮೂಲಕ ವಿಲೇವಾರಿ ಮಾಡಲಾಗುವುದು.
2. ಫಸಲಿನ ಟೆಂಡರ್‌ನಲ್ಲಿ ಭಾಗವಹಿಸಲು ಇಷ್ಟವುಳ್ಳವರು ಕಛೇರಿ ವೇಳೆಯಲ್ಲಿ ನಿಗದಿತ ಟೆಂಡರ್ ಫಾರಂನ್ನು ರೂ. 25/– (ರೂ.ಇಪ್ಪತ್ತೈದು) ಗಳನ್ನು ಪಾವತಿ ಮಾಡಿ ಪಡೆಯಬಹುದಾಗಿದೆ. ನಿಗದಿತ ಟೆಂಡರ್ ಫಾರಂನಲ್ಲಿ ಮಾತ್ರ ಟೆಂಡರ್ ಸಲ್ಲಿಸಬೇಕು.
3. ಟೆಂಡರ್ ಫಾರಂನ್ನು ಭರ್ತಿ ಮಾಡಿ ಇ.ಎಂ.ಡಿ. ಮೊತ್ತ ಮತ್ತು ಟೆಂಡರ್ ಮೊತ್ತದ ಶೇ. 50 ರಷ್ಟು ಹಣವನ್ನು ಪ್ರತ್ಯೇಕ ಕ್ರಾಸ್ ಡಿ.ಡಿ.ಯೊಂದಿಗೆ ಲಗತ್ತಿಸಿ ಸೀಲು ಮಾಡಿದ ಲಕೋಟೆಯಲ್ಲಿ ಸಲ್ಲಿಸಬೇಕು.
4. ಇ.ಎಂ.ಡಿ. ಹಣ ಮತ್ತು ಶೇ. 50ರ ಹಣದ ಕ್ರಾಸ್ ಡಿ.ಡಿ.ಯನ್ನು ಕ್ಷೇತ್ರದ ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು/ ಸಹಾಯಕ ತೋಟಗಾರಿಕೆ ನಿರ್ದೇಶಕರು ಪದನಾಮದಲ್ಲಿ ತೆಗೆಯಬೇಕು.

5. ಟೆಂಡರ್ ಫಾರಂನಲ್ಲಿ ಪೂರ್ಣ ಹೆಸರು, ವಿಳಾಸ, ಟೆಂಡರ್ ಮೊತ್ತ (ಅಂಕಿಗಳಲ್ಲಿ ಮತ್ತು ಅಕ್ಷರಗಳಲ್ಲಿ ಪ್ರತ್ಯೇಕವಾಗಿ) ಇತ್ಯಾದಿಗಳನ್ನು ಸಂಪೂರ್ಣವಾಗಿ ದಾಖಲಿಸಿ ಸಹಿ ಮಾಡಿರಬೇಕು. ಅಪೂರ್ಣ ಹಾಗೂ ಲೋಪದೋಷಿತ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.
6. ಯಶಸ್ವಿ ಬಿಡ್ಡುದಾರರು ಇಲಾಖೆಯೊಂದಿಗೆ ಇಲಾಖೆಯ ನಿಯಮಗಳನ್ನೊಳಗೊಂಡ ಕರಾರು ಪತ್ರವನ್ನು ಸಹಿ ಹಾಕಿ ಕರಾರು ಮಾಡಿಕೊಳ್ಳಬೇಕು ಮತ್ತು ಅದಕ್ಕೆ ಬದ್ಧರಾಗಿರಬೇಕು.
7. ಮೇಲಾಧಿಕಾರಿಗಳಿಂದ ಅನುಮೋದನೆ ಬಂದ ನಂತರ 10 ದಿನದೊಳಗಾಗಿ ಉಳಿದ ಶೇ. 50 ರ ಮೊತ್ತವನ್ನು ಕ್ರಾಸ್ ಡಿ.ಡಿ. ಮೂಲಕ ಪಾವತಿಸಬೇಕು.
8. ಫಸಲಿನ ಕಾವಲು ಕಟ್ಟಳೆಗಳನ್ನು ಸಫಲ ಟೆಂಡರ್‌ದಾರರೆ ನೋಡಿಕೊಳ್ಳತಕ್ಕದ್ದು.
9. ಫಸಲನ್ನು ಕಟಾವು ಮಾಡಿಕೊಳ್ಳುವ ಅವಧಿಗೆ ಕಟಾವು ಸೀಮಿತಗೊಳಿಸಬೇಕು. ಬಲಿತ ಕಾಯಿಗಳನ್ನು ಮಾತ್ರ ಕೊಯಿಲು ಮಾಡಲು ಅವಕಾಶವಿರುತ್ತದೆ.
10. ಫಸಲು ಯಾವುದೇ ಪ್ರಕೃತಿ ವಿಕೋಪಕ್ಕೆ ಹಾನಿಯಾದರೆ ಇಲಾಖೆಯು ಜವಾಬ್ದಾರಿಯಲ್ಲ. ಹಾಗೂ ಯಾವುದೇ ಪರಿಸ್ಥಿತಿಯಲ್ಲಿ ಹಣ ಹಿಂದಿರುಗಿಸಲಾಗುವುದಿಲ್ಲ.
11. ಫಸಲು ವೀಕ್ಷಿಸಲು ಇಷ್ಟವುಳ್ಳವರು ಕಛೇರಿಯ ವೇಳೆಯಲ್ಲಿ ಸಂಬಂಧಿಸಿದ ಕ್ಷೇತ್ರದ ಅಧಿಕಾರಿಗಳನ್ನು ಕಂಡು ಮಾಹಿತಿ ಪಡೆಯಬಹುದು.
12. ಟೆಂಡರ್‌ದಾರರು ಇಲಾಖೆಯ ಎಲ್ಲಾ ನಿಭಂದನೆಗಳಿಗೆ ಬದ್ಧರಾಗಿರಬೇಕು, ಒಂದು ವೇಳೆ ಯಾವುದೇ ನಿಯಮ ಉಲ್ಲಂಘಿಸಿದರೆ ಠೇವಣಿ ಹಣ ಮತ್ತು ಶೇ. 50 ರ ಮೊತ್ತವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.
13. ಫಸಲಿಗೆ ಯೋಗ್ಯ ಬೆಲೆ ಬಾರದಿದ್ದಲ್ಲಿ ಕಟಾವಿಗೆ ಅನುಮತಿ ನೀಡುವುದು/ತಿರಸ್ಕರಿಸುವುದು ಇಲಾಖೆಯ ಸಕ್ಷಮ ಪ್ರಾಧಿಕಾರಕ್ಕೆ ಸೇರಿರುತ್ತದೆ.
14. ಟೆಂಡರ್‌ನಲ್ಲಿ ಭಾಗವಹಿಸಲು ಇಚ್ಚೆವುಳ್ಳವರು ಇಲಾಖಾ ಕಚೇರಿಗಳಿಗೆ ಭೇಟಿ ಮಾಡಿ ಸಂಪೂರ್ಣ ಮಾಹಿತಿ ಪಡೆದುಕೊಳ್ಳಬೇಕು.
15. ಹೆಚ್ಚಿನ ಮಾಹಿತಿಗಾಗಿ ಕಛೇರಿ ಅಧಿಕಾರಿಗಳನ್ನು ಭೇಟಿಯಾಗುವುದು.

ತೋಟಗಾರಿಕೆ ಉಪ ನಿರ್ದೇಶಕರು,
ಪಿ.ಆರ್. 259 ಗಾಂದಿ ಪಾರ್ಕ್, ಶಿವಮೊಗ್ಗ.

**ಕೃಷಿ ಇಲಾಖೆ**

**ವ್ಯವಸ್ಥಾಪಕರ ಕಛೇರಿ ಬೀಜೋತ್ಪಾದನಾ ಕೇಂದ್ರ ಹಳ್ಳಿಕೆರೆ, ಭದ್ರಾವತಿ ತಾ॥**

**ಟೆಂಡರ್ ಕಂ ಸಾರ್ವಜನಿಕ ಬಹಿರಂಗ ಹರಾಜು ಪ್ರಕಟಣೆ**

**ನಂ. ಬಿ.ಕೇಂ.ಹ/ ತೆಂಗಿನ ಫಸಲು / ಬ.ಹ / 2008–09, ದಿನಾಂಕ: 17ನೇ ಏಪ್ರಿಲ್ 2008**

**ವಿಷಯ:** ಬೀಜೋತ್ಪಾದನಾ ಕೇಂದ್ರ ಹಳ್ಳಿಕೆರೆ, ಭದ್ರಾವತಿ ತಾಲ್ಲೂಕು ಈ ಕೃಷಿ ಕ್ಷೇತ್ರದಲ್ಲಿ ಹಾಲಿ ಫಸಲು ಬಿಡುತ್ತಿರುವ 207 ತೆಂಗಿನ ಗಿಡಗಳ ಫಸಲನ್ನು ಟೆಂಡರ್ ಕಂ ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡುವ ಬಗ್ಗೆ.

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಬೀಜೋತ್ಪಾದನಾ ಕೇಂದ್ರ, ಹಳ್ಳಿಕೆರೆ ಭದ್ರಾವತಿ ತಾಲ್ಲೂಕು, ಈ ಕ್ಷೇತ್ರದಲ್ಲಿ ಹಾಲಿ ಫಸಲು ಬಿಡುತ್ತಿರುವ 207 ತೆಂಗಿನ ಗಿಡಗಳ ಫಸಲನ್ನು ದಿನಾಂಕ 31.05.2008ನೇ ಶನಿವಾರ ಉಪ ಕೃಷಿ ನಿರ್ದೇಶಕರು, ಜಿಲ್ಲಾ ಕೃಷಿ ತರಬೇತಿ ಕೇಂದ್ರ, ಹಳ್ಳಿಕೆರೆ ಇವರ ಸಮ್ಮುಖದಲ್ಲಿ ಬೆಳಿಗ್ಗೆ 11.00 ಗಂಟೆಗೆ ಟೆಂಡರ್ ಕಂ ಬಹಿರಂಗ ಹರಾಜು ನಡೆಸಲಾಗುವುದು. ಇಚ್ಛೆಯುಳ್ಳವರು ಈ ಹರಾಜಿನಲ್ಲಿ ಭಾಗವಹಿಸಲು ಹರಾಜು ಕೂಗಲು ಕೋರಿದೆ.

| ಕ್ರ. ಸಂ. | ಕೃಷಿ ಕ್ಷೇತ್ರ | ಫಸಲಿನ ಹೆಸರು ಅವಧಿ | ಗಿಡಗಳ ಸಂಖ್ಯೆ | ಬಹಿರಂಗ ಹರಾಜು ದಿನಾಂಕ ಮತ್ತು ವೇಳೆ | ಬಹಿರಂಗ ಹರಾಜು ನಡೆಯುವ ಸ್ಥಳ | ಇ.ಎಂ.ಡಿ. ಮೊತ್ತ |
|---|---|---|---|---|---|---|
| 1. | ಬೀಜೋತ್ಪಾದನ ಕೇಂದ್ರ, ಹಳ್ಳಿಕೆರೆ, ಭದ್ರಾವತಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ | ತೆಂಗು 01.06.08 ರಿಂದ 31.05.09 | 207 | 31.05.08 ಬೆಳಿಗ್ಗೆ 11.00 ಗಂಟೆಗೆ | ಉಪ ಕೃಷಿ ನಿರ್ದೇಶಕರ ಕಛೇರಿ, ಜಿಲ್ಲಾ ಕೃಷಿ ತರಬೇತಿ ಕೇಂದ್ರ, ಹಳ್ಳಿಕೆರೆ ಭದ್ರಾವತಿ ತಾಲ್ಲೂಕು | 2500/– |

**ಟೆಂಡರ್ ಕಂ ಸಾರ್ವಜನಿಕ ಬಹಿರಂಗ ಹರಾಜಿನಲ್ಲಿ ಭಾಗವಹಿಸಲು ಪಾಲಿಸಬೇಕಾದ ನಿಯಮಗಳು (ಷರತ್ತು)**

1. ಫಸಲನ್ನು ಟೆಂಡರ್ ಕಂ ಸಾರ್ವಜನಿಕ ಹರಾಜು ಮೂಲಕ ವಿಲೇವಾರಿ ಮಾಡಲಾಗುವುದು.

2. ಫಸಲಿನ ಟೆಂಡರಿನಲ್ಲಿ ಕಂ ಸಾರ್ವಜನಿಕ ಹರಾಜಿನಲ್ಲಿ ಭಾಗವಹಿಸಲು ಇಷ್ಟವುಳ್ಳವರು ಕಛೇರಿಯ ವೇಳೆಯಲ್ಲಿ ನಿಗದಿತ ಟೆಂಡರ್ ಫಾರಂನ್ನು ರೂ.25–00 (ಇಪ್ಪತ್ತೈದು ರೂ.ಮಾತ್ರ) ಗಳನ್ನು ಪಾವತಿ ಮಾಡಿ ಪಡೆಯಬಹುದಾಗಿದೆ.
3. ಟೆಂಡರ್ ಫಾರಂ ಅನ್ನು ಭರ್ತಿ ಮಾಡಿ, ಇ.ಎಂ.ಡಿ. ಮೊತ್ತ ಮತ್ತು ಟೆಂಡರ್ ಮೊತ್ತದ ಶೇಕಡ 50 ರಷ್ಟು ಹಣವನ್ನು ಪ್ರತ್ಯೇಕ ಕ್ರಾಸ್ ಡಿ.ಡಿ.ಯೊಂದಿಗೆ ಲಗತ್ತಿಸಿ, ಸೀಲು ಮಾಡಿದ ಲಕೋಟೆಯಲ್ಲಿ ಸಲ್ಲಿಸಬೇಕು.
4. ಇ.ಎಂ.ಡಿ. ಮತ್ತು ಶೇಕಡ 50ರ ಹುಂಡಿ ಕ್ರಾಸ್ ಡಿ.ಡಿ.ಯನ್ನು ವ್ಯವಸ್ಥಾಪಕರು, ಬೀಜೋತ್ಪಾದನಾ ಕೇಂದ್ರ, ಹಳ್ಳಿಕೆರೆ ರವರ ಹೆಸರಿಗೆ ತೆಗೆಯಬೇಕು.
5. ಅಪೂರ್ಣ ಹಾಗೂ ಲೋಪದೋಷಪೂರಿತ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.
6. ಯಶಸ್ವಿ ಬಿಡ್ಡುದಾರರು ಇಲಾಖೆಯೊಂದಿಗೆ ಇಲಾಖೆಯ ನಿಯಮಗಳನ್ನೊಳಗೊಂಡ ಕರಾರು ಪತ್ರವನ್ನು ಸಹಿ ಹಾಕಿ ಕರಾರು ಮಾಡಿಕೊಳ್ಳಬೇಕು ಮತ್ತು ಅದಕ್ಕೆ ಬದ್ಧರಾಗಿರಬೇಕು.
7. ಮೇಲಾಧಿಕಾರಿಗಳಿಂದ ಅನುಮೋದನೆ ಬಂದ ನಂತರ ಹತ್ತು ದಿನಗಳೊಳಗಾಗಿ ಉಳಿದ ಶೇಕಡ 50ರ ಮೊತ್ತವನ್ನು ಕ್ರಾಸ್ ಡಿ.ಡಿ. ಮೂಲಕ ಪಾವತಿಸಬೇಕು.
8. ಫಸಲಿನ ಕಾವಲು ಕಟ್ಟಳೆಗಳನ್ನು ಸಫಲ ಟೆಂಡರ್‌ದಾರರೇ ನೋಡಿಕೊಳ್ಳತಕ್ಕದ್ದು.
9. ಫಸಲನ್ನು ಕಟಾವು ಮಾಡಿಕೊಳ್ಳುವ ಅವಧಿಗೆ ಕಟಾವು ಸೀಮಿತಗೊಳಿಸಬೇಕು. ಬಲಿತ ಕಾಯಿಗಳನ್ನು ಮಾತ್ರ ಕೊಯಿಲು ಮಾಡಲು ಅವಕಾಶವಿರುತ್ತದೆ.
10. ಫಸಲು ಯಾವುದೇ ವಿಕೋಪಕ್ಕೆ (ಪ್ರಕೃತಿ) ಹಾನಿಯಾದರೆ ಇಲಾಖೆಯು ಜವಾಬ್ದಾರಿಯಲ್ಲ. ಹಾಗೂ ಯಾವುದೇ ಪರಿಸ್ಥಿತಿಯಲ್ಲಿ ಹಣ ಹಿಂದಿರುಗಿಸಲಾಗುವುದಿಲ್ಲ.
11. ಫಸಲು ವೀಕ್ಷಿಸಲು ಇಷ್ಟವುಳ್ಳವರು ಕಛೇರಿಯ ವೇಳೆಯಲ್ಲಿ ಸಂಬಂಧಿಸಿದ ಕ್ಷೇತ್ರದ ಅಧಿಕಾರಿಗಳನ್ನು ಕಂಡು ಮಾಹಿತಿ ಪಡೆಯಬಹುದು.
12. ಟೆಂಡರ್‌ದಾರರು ಇಲಾಖೆಯ ಎಲ್ಲಾ ನಿಬಂಧನೆಗಳಿಗೆ ಬದ್ಧರಾಗಿರಬೇಕು. ಒಂದು ವೇಳೆ ಯಾವುದೇ ನಿಯಮ ಉಲ್ಲಂಘಿಸಿದರೆ ಠೇವಣಿ ಮತ್ತು ಶೇಕಡ 50ರ ಮೊತ್ತವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.
13. ಫಸಲಿಗೆ ಯೋಗ್ಯ ಬೆಲೆ ಬಾರದಿದ್ದಲ್ಲಿ ಕಟಾವಿಗೆ ಅನುಮತಿ ನೀಡುವುದು/ತಿರಸ್ಕರಿಸುವುದು ಇಲಾಖೆಯ ಸಕ್ಷಮ ಪ್ರಾಧಿಕಾರಕ್ಕೆ ಸೇರಿರುತ್ತದೆ.
14. ಟೆಂಡರ್‌ನಲ್ಲಿ ಭಾಗವಹಿಸಲು ಇಚ್ಛೆವುಳ್ಳವರು ಇಲಾಖಾ ಕಛೇರಿಗಳಿಗೆ ಭೇಟಿ ಮಾಡಿ ಸಂಪೂರ್ಣ ಮಾಹಿತಿ ಪಡೆದುಕೊಳ್ಳಬೇಕು.

ವ್ಯವಸ್ಥಾಪಕರು
ಪಿ.ಆರ್. 260 ಬೀಜೋತ್ಪಾದನಾ ಕೇಂದ್ರ,
ಹಳ್ಳಿಕೆರೆ, ಭದ್ರಾವತಿ ತಾ

**ತೋಟಗಾರಿಕೆ ಇಲಾಖೆ**

**ತೋಟಗಾರಿಕೆ ನಿರ್ದೇಶನಾಲಯ ಲಾಲ್‌ಬಾಗ್, ಬೆಂಗಳೂರು–04**

**ಸಾರ್ವಜನಿಕ ಟೆಂಡರ್ ಯಾ ಪ್ರಕಟಣೆ**

**ಸಂ:ತೋಉನಿ:ಸಸಂ:ವಿನಿ–2:2:2008–09, ದಿನಾಂಕ: 19ನೇ ಏಪ್ರಿಲ್ 2008**

**ವಿಷಯ:** ತೋಟಗಾರಿಕೆ ಉಪನಿರ್ದೇಶಕರು (ಸಸ್ಯ ಸಂರಕ್ಷಣೆ), ಲಾಲ್‌ಬಾಗ್, ಬೆಂಗಳೂರು ರವರ ಅಧೀನದ ಪ್ರಯೋಗಶಾಲೆಯಲ್ಲಿ ಪರೋಪಜೀವಿಗಳನ್ನು ಉತ್ಪಾದನೆ ಮಾಡಿಕೊಡಲು ಟೆಂಡರ್ ದರಗಳನ್ನು ನೀಡುವ ಬಗ್ಗೆ.

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಈ ಮೂಲಕ ಸಾರ್ವಜನಿಕವಾಗಿ ಪ್ರಕಟಿಸುವುದೇನೆಂದರೆ ತೋಟಗಾರಿಕೆ ಉಪ ನಿರ್ದೇಶಕರು (ಸಸ್ಯ ಸಂರಕ್ಷಣೆ), ಲಾಲ್‌ಬಾಗ್, ಬೆಂಗಳೂರು ರವರ ಪ್ರಯೋಗಶಾಲೆಯಲ್ಲಿ ಪರೋಪಜೀವಿಗಳ ಉತ್ಪಾದನೆಯನ್ನು 2008–09ನೇ ಸಾಲಿನಲ್ಲಿ ಸ್ತ್ರೀ ಶಕ್ತಿ ಸಂಘ/ಕೃಷಿ ವಿಜ್ಞಾನ ಕೇಂದ್ರ/ತಾಂತ್ರಿಕ ಪರಿಣಿತಿವುಳ್ಳ ಗುತ್ತಿಗೆದಾರರಿಂದ ಕೈಗೊಳ್ಳಲು ಟೆಂಡರನ್ನು ಕರೆಯಲಾಗಿದೆ. ಪರೋಪಜೀವಿಗಳನ್ನು ಉತ್ಪಾದನೆ ಮಾಡಿ ಕೊಡಲು ಕೆಳಕಂಡ ಷರತ್ತುಗಳಿಗೆ ಒಳಪಟ್ಟು ದಿ:19.05.2008ರಂದು ಅಥವಾ ಒಳಗೆ ಪ್ರತಿ ಹುಳುವಿನ ಉತ್ಪಾದನೆಗೆ ತಮ್ಮ ದರ ನಮೂದಿಸಿ ಟೆಂಡರ್ ನೀಡಲು ಸ್ತ್ರೀಶಕ್ತಿ ಸಂಘ/ಕೃಷಿ ವಿಜ್ಞಾನ ಕೇಂದ್ರ/ತಾಂತ್ರಿಕ ಪರಿಣಿತಿವುಳ್ಳ ಗುತ್ತಿಗೆದಾರರುಗಳನ್ನು ಈ ಮೂಲಕ ವಿನಂತಿಸಿದೆ.

**ಷರತ್ತುಗಳು:**

1) ಟೆಂಡರ್‌ದಾರರು ಟೆಂಡರ್ ಜೊತೆಯಲ್ಲಿ ಇ.ಎಮ್.ಡಿ. ರೂ.10,000/– ಕ್ರಾಸ್ ಮಾಡಿದ ಡಿ.ಡಿ.ಯನ್ನು ತೋಟಗಾರಿಕೆ ಉಪ ನಿರ್ದೇಶಕರು (ಸಸ್ಯ ಸಂರಕ್ಷಣೆ), ಲಾಲ್‌ಬಾಗ್, ಬೆಂಗಳೂರು ರವರ ಹೆಸರಿನಲ್ಲಿ ಪಡೆದು ಲಗತ್ತಿಸಬೇಕು.
2) ಟೆಂಡರ್ ದರಗಳು ನಿಗಧಿಪಡಿಸಿದ ಅವಧಿ ಒಳಗಾಗಿ ನೀಡಬೇಕು. ಅವಧಿ ನಂತರ ಬಂದ ದರಗಳನ್ನು ಯಾವುದೇ ಕಾರಣಕ್ಕೂ ಒಪ್ಪುವುದಿಲ್ಲ.

3) ಟೆಂಡರ್‌ದಾರರು ಇಲಾಖೆಯ ಮೂಲಭೂತ ಸೌಕರ್ಯಗಳನ್ನು ಉಪಯೋಗಿಸಿಕೊಂಡು ಗೋನಿಯೋಜಸ್ ಹಾಗೂ ಬ್ರ್ಯಾಕಿಮೇರಿಯಾ ಪರೋಪಜೀವಿಗಳನ್ನು ಉತ್ಪಾದಿಸಲು ಅಗತ್ಯವಿರುವ ಪರಿಕರಗಳನ್ನು ಹಾಗೂ ಉತ್ಪಾದನಾ ವೆಚ್ಚವನ್ನು ಸೇರಿಸಿ ಟೆಂಡರ್ ದರ ನಮೂದಿಸಬೇಕು.
4) ಪರೋಪಜೀವಿಗಳನ್ನು ಲಾಲ್‌ಬಾಗಿನ ಪ್ರಯೋಗಶಾಲೆಯಲ್ಲಿಯೇ ಉತ್ಪಾದನೆ ಮಾಡಿ ಕೊಡಬೇಕು.
5) ಪರೋಪಜೀವಿಗಳನ್ನು ಉತ್ಪಾದನೆ ಮಾಡಿ ಪ್ರಯೋಗಶಾಲೆಯ ಅಧಿಕಾರಿಗಳಿಗೆ ವಹಿಸಿಕೊಟ್ಟ ಸಂಖ್ಯೆಗೆ ಅನುಗುಣವಾಗಿ ಹಣ ಸಂದಾಯ ಮಾಡಲಾಗುವುದು.
6) ಪ್ರಯೋಗ ಶಾಲೆಯಲ್ಲಿ ಸ್ವಚ್ಛತೆಗೆ ಹೆಚ್ಚಿನ ಆದ್ಯತೆ ನೀಡಬೇಕು.
7) ಪರೋಪಜೀವಿಗಳ ಉತ್ಪಾದನೆ ಕಾರ್ಯವನ್ನು ಸಾಲದ ರೂಪದಲ್ಲಿ ಕೈಗೊಳ್ಳಬೇಕಾಗಿರುವ ಕಾರಣ ಯಾವುದೇ ಮುಂಗಡ ಸಂದಾಯಕ್ಕೆ ಅವಕಾಶವಿರುವುದಿಲ್ಲ.
8) ಪರೋಪಜೀವಿಗಳ ಉತ್ಪಾದನೆ ಕಾರ್ಯವನ್ನು ದಿನಾಂಕ:31.03.2009ರ ತನಕ ನಿರ್ವಹಿಸಬೇಕಾಗಿರುತ್ತದೆ.
9) ಪರೋಪಜೀವಿಗಳ ಬೇಡಿಕೆಗೆ ಅನುಗುಣವಾಗಿ ಉತ್ಪಾದನಾ ಸಾಮರ್ಥ್ಯವನ್ನು ಸಹ ರೂಢಿಸಿಕೊಳ್ಳಬೇಕು. ಇಲಾಖೆಯಿಂದ ನಿಮಗೆ ಯಾವುದೇ ಸಹಾಯಕರನ್ನು ನೀಡುವುದಿಲ್ಲ. ಅನುಮೋದಿತ ಟೆಂಡರ್‌ದಾರರು ರೂ.100–00 ಗಳ ಛಾಪಾ ಕಾಗದದಲ್ಲಿ ನಿಗಧಿಪಡಿಸುವ ಷರತ್ತು ಮತ್ತು ಒಡಂಬಡಿಕೆಯನ್ನು ಬರೆದು ಕೊಡಬೇಕು.
10) ಟೆಂಡರ್ ದರಗಳು ಮೇಲಾಧಿಕಾರಿಗಳಿಂದ ಅನುಮೋದನೆಯಾದ ನಂತರ ಕಾರ್ಯಾದೇಶ ನೀಡಲಾಗುವುದು.
11) ಟೆಂಡರ್ ಫಾರಂ ಬೆಲೆ ರೂ.500/–ಗಳನ್ನು ಪಾವತಿಸಿ ಟೆಂಡರ್ ಫಾರಂಗಳನ್ನು ಕಛೇರಿ ಕೆಲಸದ ವೇಳೆಯಲ್ಲಿ ದಿ:19.04.2008 ರಿಂದ ದಿ:19.05.2008ರ (ಸಾಯಂಕಾಲ 5.00 ಗಂಟೆಯವರೆಗೆ) ಕಛೇರಿಯ ಕೆಲಸದ ಅವಧಿಯಲ್ಲಿ ಪಡೆಯಬಹುದು. ಭರ್ತಿ ಮಾಡಿದ ಮೊಹರಾದ ಟೆಂಡರ್‌ಗಳನ್ನು ತೋಟಗಾರಿಕೆ ಉಪ ನಿರ್ದೇಶಕರು (ಸಸ್ಯ ಸಂರಕ್ಷಣೆ), ಲಾಲ್‌ಬಾಗ್, ಬೆಂಗಳೂರು ಇವರಿಗೆ ದಿ:19.05.2008ರಂದು ಸಾಯಂಕಾಲ 5.00 ಗಂಟೆಯೊಳಗೆ ಸಲ್ಲಿಸಬೇಕು. ಟೆಂಡರ್‌ಗಳನ್ನು ಟೆಂಡರ್ ಸಮಿತಿಯು ದಿ:20.05.2008ರ ಬೆಳಿಗ್ಗೆ 11.00 ಗಂಟೆಗೆ ತೋಟಗಾರಿಕೆ ಜಂಟಿ ನಿರ್ದೇಶಕರು (ತೋಟದ ಬೆಳೆಗಳು & ಸಸ್ಯ ಸಂರಕ್ಷಣೆ), ಲಾಲ್‌ಬಾಗ್, ಬೆಂಗಳೂರು ಕಛೇರಿಯಲ್ಲಿ ತೆರೆಯಲಾಗುವುದು.
12) ಪ್ರತಿ ಮಾಹೆ ಉತ್ಪಾದಿಸಬೇಕಾದ ಪರೋಪಜೀವಿಗಳ (ಹುಳುಗಳ) ಪ್ರಮಾಣವನ್ನು ಕಾರ್ಯಾದೇಶದ ಸಮಯದಲ್ಲಿ ನೀಡಲಾಗುವುದು.
13) ಯಶಸ್ವಿ ಟೆಂಡರ್‌ದಾರರಿಗೆ ಮುಂಗಡ ಹಣ ಪಾವತಿಸುವುದಿಲ್ಲ.
14) ಹೆಚ್ಚಿನ ಮಾಹಿತಿಗಾಗಿ ತೋಟಗಾರಿಕೆ ಉಪನಿರ್ದೇಶಕರು (ಸಸ್ಯ ಸಂರಕ್ಷಣೆ), ಲಾಲ್‌ಬಾಗ್, ಬೆಂಗಳೂರು ಕಛೇರಿ ಇವರನ್ನು ಸಂಪರ್ಕಿಸುವುದು.

ತೋಟಗಾರಿಕೆ ಉಪ ನಿರ್ದೇಶಕರು
(ಸಸ್ಯ ಸಂರಕ್ಷಣೆ)
ಲಾಲ್‌ಬಾಗ್, ಬೆಂಗಳೂರು.

ಪಿ.ಆರ್. 263

**DEPARTMENT OF PUBLIC INSTRUCTIONS**
**Office of the Deputy Director of Public Instruction Chikodi**
**FORM-1**
**(See Rule 9)**
**NOTIFICATION**

Shri/ Smt: **RAMESH SHIVALINGAPPA SHIKHAMANI. A.M.** Working as **K.B.S. PATTANKUDI** in the **Education Department of / Office of B.E.O.Office, Chikodi** is permitted to change his/her Name to **RAMESH SHIVALINGAPPA SHEKHAMMANAVAR**

Signature and Designation of the
Appointing Authority.

P.D. 37

**EDUCATION DEPARTMENT**
**Office of the D.D.P.I. Chikodi**
**FORM-1**
**(See Rule 9)**
**NOTIFICATION**

Shri **NISHIKANT ARJUN MANG** Working as **ASST. TEACHER** Department of / Office of Shri S.M. C.P.U. College, Chinchali is permitted to change his name to **NISHIKANT ARJUN TERADAL.**

Signature and Designation of the
Appointing Authority.

P.D. 38

**ತೋಟಗಾರಿಕೆ ಇಲಾಖೆ**

**ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರ ಕಛೇರಿ, (ರಾಜ್ಯವಲಯ), ಕೋಲಾರ**

**ತೋಟಗಾರಿಕೆ ತರಬೇತಿಗಾಗಿ ಅರ್ಜಿಗಳ ಆಹ್ವಾನ ಪ್ರಕಟಣೆ**

**ಸಂಖ್ಯೆ:ಹಿಸತೋನಿ:ರಾವ:ಕೋ:ಸತೋಅ:32:2008–09, ದಿನಾಂಕ: 2ನೇ ಮೇ 2008**

ದಿನಾಂಕ:01.06.2008 ರಿಂದ 31.01.2009 ರ ವರೆಗೆ ಲಾಲ್‌ಬಾಗ್ ತರಬೇತಿ ಕೇಂದ್ರ ಬೆಂಗಳೂರು ಇಲ್ಲಿ ನಡೆಯುವ (8 ತಿಂಗಳ ತರಬೇತಿ) ತೋಟಗಾರಿಕೆ ತರಬೇತಿಗಾಗಿ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಲಾಗಿದೆ. ಈ ತರಬೇತಿಗೆ ಕೋಲಾರ ಜಿಲ್ಲೆಯಲ್ಲಿ ವಾಸವಾಗಿರುವವರು ಮಾತ್ರ ಅರ್ಜಿ ಹಾಕಲು ಅರ್ಹರಾಗಿರುತ್ತಾರೆ.

ಸಾಮಾನ್ಯ ಅಭ್ಯರ್ಥಿಗಳು ಕನಿಷ್ಟ ಎಸ್.ಎಸ್.ಎಲ್.ಸಿ.ಯಲ್ಲಿ ಉತ್ತೀರ್ಣರಾಗಿರಬೇಕು. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಅಭ್ಯರ್ಥಿಗಳು ಅನುತ್ತೀರ್ಣರಾಗಿದ್ದರೂ ಸಹ ಅರ್ಹರಿರುತ್ತಾರೆ. ಆದರೆ, ಕನಿಷ್ಟ 7ನೇ ತರಗತಿಯಲ್ಲಿ ಉತ್ತೀರ್ಣರಾಗಿರಬೇಕು. ತರಬೇತಿ ಪ್ರವೇಶ ಬಯಸುವ ಅಭ್ಯರ್ಥಿ ತಂದೆ/ತಾಯಿ/ಪೋಷಕರು ಕಡ್ಡಾಯವಾಗಿ ಜಮೀನು ಹೊಂದಿ ಸ್ವಂತ ಸಾಗುವಳಿ ಮಾಡುತ್ತಿರಬೇಕು. ಈ ಬಗ್ಗೆ ಜಮೀನಿನ ಪಹಣೆಯನ್ನು ನೀಡುವುದು ಕಡ್ಡಾಯವಾಗಿರುತ್ತದೆ. ವಯೋಮಿತಿ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದವರಿಗೆ ಕನಿಷ್ಟ 16 ವರ್ಷ ಮತ್ತು ಗರಿಷ್ಟ 33 ವರ್ಷಗಳು. ಇತರರಿಗೆ ಕನಿಷ್ಟ 16 ವರ್ಷ ಮತ್ತು ಗರಿಷ್ಟ 30 ವರ್ಷಗಳು ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ ಅಭ್ಯರ್ಥಿಗಳು ಜಾತಿ ಪ್ರಮಾಣ ಪತ್ರ ಲಗತ್ತಿಸಿ ಮೀಸಲಾತಿ ಪಡೆದುಕೊಳ್ಳಬೇಕು. ಮೀಸಲಾತಿ ಬಯಸುವ ಇತರೆ ವರ್ಗಗಳ ಅಭ್ಯರ್ಥಿಗಳು ಸರ್ಕಾರದ ಆದೇಶ ಸಂಖ್ಯೆ:SW/DR/CCA.95 ದಿನಾಂಕ:28.12.1995ಕ್ಕೆ ಸಂಬಂಧಿಸಿದಂತೆ ನಮೂನೆ–2 ಮತ್ತು ನಮೂನೆ–3 ರಲ್ಲಿ ಮೀಸಲಾತಿ ಪ್ರಮಾಣ ಪತ್ರವನ್ನು ಅರ್ಜಿಯ ಜೊತೆಯಲ್ಲಿ ಲಗತ್ತಿಸಿರಬೇಕು. ಅರ್ಜಿಗಳನ್ನು ಈ ಕೆಳ ಸಹಿದಾರರ ಕಛೇರಿಯಲ್ಲಿ ಸಾಮಾನ್ಯ ಅಭ್ಯರ್ಥಿಗಳು ರೂ.10/– ಹಾಗೂ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಅಭ್ಯರ್ಥಿಗಳು ರೂ.5/– ಗಳನ್ನು ಪಾವತಿಸಿ ಪಡೆಯಬಹುದು. ತರಬೇತಿಗೆ ಆಯ್ಕೆಯಾದ ಅಭ್ಯರ್ಥಿಗಳಿಗೆ ರೂ.750/–ಗಳ ಮಾಸಿಕ ವೇತನವನ್ನು ನೀಡಲಾಗುವುದು.

ಸಂಬಂಧಪಟ್ಟ ದಾಖಲಾತಿಗಳ ಸಮೇತ ಭರ್ತಿ ಮಾಡಿದ ಅರ್ಜಿಯನ್ನು ದಿನಾಂಕ:19.5.2008 ರಂದು ಸಂಜೆ 5.30 ಗಂಟೆ ಒಳಗಾಗಿ ಈ ಕೆಳ ಸಹಿದಾರರ ಕಛೇರಿಗೆ ಅಂಚೆ ಅಥವಾ ಮುದ್ದಾಂ ತಲುಪಿಸಬೇಕು. ಯಾವುದೇ ಕಾರಣದಿಂದ ತಡವಾಗಿ ಬರುವ, ಅಪೂರ್ಣವಾಗಿರುವ ಸಂಬಂಧಪಟ್ಟ, ದಾಖಲಾತಿಗಳನ್ನು ಲಗತ್ತಿಸದ ಮತ್ತು ತಪ್ಪುಗಳಿಂದ ಕೂಡಿರುವ ಅರ್ಜಿಗಳನ್ನು ತಿರಸ್ಕರಿಸಲಾಗುವುದು. ಮೌಖಿಕ ಸಂದರ್ಶನವನ್ನು ದಿನಾಂಕ:22.5.2008 ರಂದು ಬೆಳಿಗ್ಗೆ 11.00 ಗಂಟೆಗೆ ಈ ಕೆಳ ಸಹಿದಾರರ ಕಛೇರಿಯಲ್ಲಿ ನಡೆಸಲಾಗುವುದು. ಈ ಸಂದರ್ಶನದಲ್ಲಿ ಸಂಬಂಧಿಸಿದ ಎಲ್ಲಾ ಮೂಲ ದಾಖಲಾತಿಗಳನ್ನು ಹಾಜರುಪಡಿಸತಕ್ಕದ್ದು. ಹೆಚ್ಚಿನ ಮಾಹಿತಿಗಾಗಿ ಈ ಕೆಳ ಸಹಿದಾರರ ಕಛೇರಿಯಲ್ಲಿ ಕಛೇರಿ ವೇಳೆಯಲ್ಲಿ ಪಡೆಯಬಹುದಾಗಿರುತ್ತದೆ.

ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು,
(ರಾಜ್ಯವಲಯ) ಕೋಲಾರ.

ಪಿ.ಆರ್. 280

**ಅರಣ್ಯ ಇಲಾಖೆ**

**ಅರಣ್ಯ ಸಂರಕ್ಷಣಾಧಿಕಾರಿ, ಕಾರ್ಯಯೋಜನೆ ಮತ್ತು ಮೋಜಣಿ, ಶಿವಮೊಗ್ಗ**

**ಸಂಕ್ಷಿಪ್ತ ಮರು ಟೆಂಡರ್ ಪ್ರಕಟಣೆ**

**ಸಂ:ಎ2.ಬಿಯುಡಿ.ಜಿ.ಐ.ಪ್ಲೇಟ್ಸ್.ಟೆಂಡರ್.ಸಿಆರ್.1/2008–09, ದಿನಾಂಕ: 12ನೇ ಮೇ 2008**

2008–09ನೇ ಸಾಲಿಗೆ ಈ ಘಟಕಕ್ಕೆ ಬೇಕಾದ ಸಂಖ್ಯೆಗಳನ್ನು ಕೊರೆದ ಜಿ.ಐ.ಪ್ಲೇಟ್‌ಗಳನ್ನು ಸರಬರಾಜು ಮಾಡುವ ಬಗ್ಗೆ ಮೊಹರಾದ ಮರು ಟೆಂಡರನ್ನು ನೊಂದಾಯಿಸಿದ ಗುತ್ತಿಗೆದಾರರಿಂದ ಕರೆಯಲಾಗಿದೆ. ಜಿ.ಐ.ಪ್ಲೇಟ್‌ನಲ್ಲಿ ಸಂಖ್ಯೆಗಳನ್ನು ಕತ್ತರಿಸಬೇಕಾದ ವಿವರವಾದ ಪಟ್ಟಿಯನ್ನು ಈ ಕಛೇರಿಯ ವಿವರವಾದ ಟೆಂಡರ್ ಅಧಿಸೂಚನೆಯಲ್ಲಿ ನಮೂದಿಸಲಾಗಿದೆ. ಈ ಕೆಳಗೆ ಸಹಿ ಮಾಡಿರುವವರು ಅಥವಾ ಅಧಿಕೃತ ಅಧಿಕಾರಿಗಳು ದಿನಾಂಕ:16.06.08 ಸಂಜೆ 4.00 ಗಂಟೆಯವರೆಗೆ ಸ್ವೀಕರಿಸುವರು.

| ಯೂನಿಟ್ ನಂ. | ವಿವರ | ಅಳತೆ | ಪ್ರಮಾಣ (ಅಂದಾಜು) | ಇ.ಎಂ.ಡಿ | ಟೆಂಡರ್ ಅಂದಾಜು ಮೊತ್ತ |
|---|---|---|---|---|---|
| 2 | ಮಂಗಳೂರು ಮತ್ತು ಕುಂದಾಪುರ ವಿಭಾಗದ ಅರಣ್ಯ ಪ್ರದೇಶದಲ್ಲಿ 213 ಕಿಮೀ. ಬ್ಲಾಕ್ ಮತ್ತು ಕಂಪಾರ್ಟ್‌ಮೆಂಟ್ ಗಳಲ್ಲಿ ಸುತ್ತಲೂ ಬರುವ ಮರಗಳನ್ನು ಗುರುತಿಸಿ, ಪಟ್ಟಿ ಮಾಡಿ ಜಿ.ಐ.ಪ್ಲೇಟ್‌ಗಳನ್ನು ಅಳವಡಿಸುವುದು. (ವಲಯ ಅರಣ್ಯಾಧಿಕಾರಿ/ವನಪಾಲಕರ ನಿರ್ದೇಶನದಂತೆ) | 12 x 4 (22 ಗೇಜ್) | 1704 ಸಂಖ್ಯೆ (639 ಮಜ್ದೂರ್) | 3000.00 | 60000.00 |

**ಷರತ್ತುಗಳು:**

1. ಮೊಹರಾದ ಮರು ಟೆಂಡರನ್ನು ಸ್ವೀಕರಿಸಿದ ದಿನಾಂಕ: 16.06.08 ರ ಸಂಜೆ 4.00 ಗಂಟೆಯ ನಂತರ ಹಾಜರು ಇರುವ ಟೆಂಡರ್‌ದಾರರ ಸಮ್ಮುಖದಲ್ಲಿ ತೆರೆಯಲಾಗುವುದು.
2. ಮರು ಟೆಂಡರ್‌ನಲ್ಲಿ ಭಾಗವಹಿಸಲು ಇಚ್ಛೆವುಳ್ಳ ಗುತ್ತಿಗೆದಾರರು ನಿಗಧಿತ ಶುಲ್ಕ ರೂ.30–00 ಮತ್ತು ಇತರೆ ತೆರಿಗೆಗಳನ್ನು ಪಾವತಿ ಮಾಡಿ 2008–09ನೇ ಸಾಲಿಗೆ ಗುತ್ತಿಗೆದಾರರ ಹೆಸರನ್ನು ನೋಂದಾಯಿಸಲು ದಿನಾಂಕ:16.06.08 ಮಧ್ಯಾಹ್ನ 12.00 ಗಂಟೆಯವರೆಗೆ ಕಾಲಾವಕಾಶ ನೀಡಲಾಗಿದೆ.
3. ನಿಗದಿತ ಟೆಂಡರ್ ನಮೂನೆಯಲ್ಲಿ ಗುತ್ತಿಗೆದಾರರು ಅತಿ ಕಡಿಮೆ ದರದಲ್ಲಿ ಪ್ಲೇಟ್ಸ್ ಅಳವಡಿಸಲು ಒಂದು ಮಜದೂರ್ ಕೂಲಿ ಒಂದು ದಿನಕ್ಕೆ ಎಂದು ನಮೂದಿಸಿ ಟೆಂಡರ್ ನೀಡತಕ್ಕದ್ದು.
4. ನಿಗದಿತ ಮರು ಟೆಂಡರ್ ನಮೂನೆಯನ್ನು ಈ ಕಛೇರಿಯ ಕೆಲಸದ ವೇಳೆಯಲ್ಲಿ ಇದಕ್ಕೆ ತಗಲುವ ಶುಲ್ಕ ರೂ.200.00 ಮತ್ತು ಇತರೆ ತೆರಿಗೆಗಳನ್ನು ಪಾವತಿಸಿ ದಿನಾಂಕ:16.06.08 ರಂದು ಮಧ್ಯಾಹ್ನ 1.30 ರವರೆಗೆ ಪಡೆಯಬಹುದಾಗಿದೆ.
5. ಗುತ್ತಿಗೆ ಅವಧಿ 31.3.2009 ರವರೆಗೆ.
6. ಅಧಿಸೂಚನೆಯಲ್ಲಿ ಕಾಣಿಸಿದ ಪ್ರಮಾಣ ಅಂದಾಜು ಪ್ರಾಯಶಃ ಶೇಕಡ 20 ರಷ್ಟು ವ್ಯತ್ಯಾಸ ಆಗಬಹುದು.
7. ಹೆಚ್ಚಿನ ಮಾಹಿತಿ ಬೇಕಾದಲ್ಲಿ ಕಛೇರಿಯ ಕೆಲಸದ ವೇಳೆಯಲ್ಲಿ ಪಡೆಯಬಹುದಾಗಿದೆ.

ಅರಣ್ಯ ಸಂರಕ್ಷಣಾಧಿಕಾರಿ,
ಕಾರ್ಯಯೋಜನೆ ಮತ್ತು ಮೋಜಣಿ, ಶಿವಮೊಗ್ಗ.

ಪಿ.ಆರ್. 281

## ಅರಣ್ಯ ಇಲಾಖೆ

## ಅರಣ್ಯ ಸಂರಕ್ಷಣಾಧಿಕಾರಿ, ಕಾರ್ಯಯೋಜನೆ ಮತ್ತು ಮೋಜಣಿ, ಶಿವಮೊಗ್ಗ

## ಸಂಕ್ಷಿಪ್ತ ಮರು ಟೆಂಡರ್ ಪ್ರಕಟಣೆ

**ಸಂ:ಎ2.ಬಿಯುಡಿ.ಜಿ.ಐ.ಪ್ಲೇಟ್ಸ್.ಟೆಂಡರ್.ಸಿಆರ್.1/2008–09, ದಿನಾಂಕ: 12ನೇ ಮೇ 2008**

2007–08ನೇ ಸಾಲಿಗೆ ಈ ಘಟಕಕ್ಕೆ ಬೇಕಾದ ಸಂಖ್ಯೆಗಳನ್ನು ಕೊರೆದ ಜಿ.ಐ.ಪ್ಲೇಟ್‌ಗಳನ್ನು ಸರಬರಾಜು ಮಾಡುವ ಬಗ್ಗೆ ಮೊಹರಾದ ಮರು ಟೆಂಡರನ್ನು ನೊಂದಾಯಿಸಿದ ಗುತ್ತಿಗೆದಾರರಿಂದ ಕರೆಯಲಾಗಿದೆ. ಜಿ.ಐ.ಪ್ಲೇಟ್‌ನಲ್ಲಿ ಸಂಖ್ಯೆಗಳನ್ನು ಕತ್ತರಿಸಬೇಕಾದ ವಿವರವಾದ ಪಟ್ಟಿಯನ್ನು ಈ ಕಛೇರಿಯ ವಿವರವಾದ ಮರು ಟೆಂಡರ್ ಅಧಿಸೂಚನೆಯಲ್ಲಿ ನಮೂದಿಸಲಾಗಿದೆ. ಈ ಕೆಳಗೆ ಸಹಿ ಮಾಡಿರುವವರು ಅಥವಾ ಅಧಿಕೃತ ಅಧಿಕಾರಿಗಳು ದಿನಾಂಕ:16.06.08 ಸಂಜೆ 4.00 ಗಂಟೆಯವರೆಗೆ ಸ್ವೀಕರಿಸುವರು.

| ಯೂನಿಟ್ ನಂ. | ವಿವರ | ಅಳತೆ | ಪ್ರಮಾಣ (ಅಂದಾಜು) | ಇ.ಎಂ.ಡಿ | ಟೆಂಡರ್ ಅಂದಾಜು ಮೊತ್ತ |
|---|---|---|---|---|---|
| 1 | ಮಂಗಳೂರು ಮತ್ತು ಕುಂದಾಪುರ ವಿಭಾಗದ ಅರಣ್ಯ ಪ್ರದೇಶದಲ್ಲಿ 213 ಕಿಮೀ. ಕಂಪಾರ್ಟ್‌ಮೆಂಟ್ ಬೌಂಡರಿಗಳನ್ನು ಬ್ಲಾಕುಗಳಾಗಿ ವಿಂಗಡಿಸಿದ ಪ್ರದೇಶಗಳಿಗೆ ಕೊರೆದ ಜಿ.ಐ.ಪ್ಲೇಟ್‌ಗಳನ್ನು ತಯಾರಿಸಿ ಸರಬರಾಜು ಮಾಡುವುದು. | 12 x 4 (22 ಗೇಜ್) | 1704 ಸಂಖ್ಯೆ | 4000.00 | 75000.00 |

**ಷರತ್ತುಗಳು:**

1) ಮೊಹರಾದ ಮರು ಟೆಂಡರನ್ನು ಸ್ವೀಕರಿಸಿದ ದಿನಾಂಕ: 16.06.08 ರ ಸಂಜೆ 4.00 ಗಂಟೆಯ ನಂತರ ಹಾಜರು ಇರುವ ಟೆಂಡರ್‌ದಾರರ ಸಮ್ಮುಖದಲ್ಲಿ ತೆರೆಯಲಾಗುವುದು.
2. ಮರು ಟೆಂಡರ್‌ನಲ್ಲಿ ಭಾಗವಹಿಸಲು ಇಚ್ಛೆವುಳ್ಳ ಗುತ್ತಿಗೆದಾರರು ನಿಗಧಿತ ಶುಲ್ಕ ರೂ.30–00 ಮತ್ತು ಇತರೆ ತೆರಿಗೆಗಳನ್ನು ಪಾವತಿ ಮಾಡಿ 2008–09ನೇ ಸಾಲಿಗೆ ಗುತ್ತಿಗೆದಾರರ ಹೆಸರನ್ನು ನೋಂದಾಯಿಸಲು ದಿನಾಂಕ:16.06.08 ಮಧ್ಯಾಹ್ನ 12.00 ಗಂಟೆಯವರೆಗೆ ಕಾಲಾವಕಾಶ ನೀಡಲಾಗಿದೆ.
3. ನಿಗದಿತ ಟೆಂಡರ್ ನಮೂನೆಯಲ್ಲಿ ಗುತ್ತಿಗೆದಾರರು ಅತಿ ಕಡಿಮೆ ದರ ಸಂಖ್ಯೆ ಕತ್ತರಿಸಿದ ಒಂದು ಜಿ.ಐ.ಪ್ಲೇಟ್‌ಗೆ ಎಂದು ನಮೂದಿಸಿ ಟೆಂಡರ್ ನೀಡತಕ್ಕದ್ದು.
4. ನಿಗದಿತ ಟೆಂಡರ್ ನಮೂನೆಯನ್ನು ಈ ಕಛೇರಿಯ ಕೆಲಸದ ವೇಳೆಯಲ್ಲಿ ಇದಕ್ಕೆ ತಗಲುವ ಶುಲ್ಕ ರೂ.200.00 ಮತ್ತು ಇತರೆ ತೆರಿಗೆಗಳನ್ನು ಪಾವತಿಸಿ ದಿನಾಂಕ:16.06.08 ರಂದು ಮಧ್ಯಾಹ್ನ 1.30 ರವರೆಗೆ ಪಡೆಯಬಹುದಾಗಿದೆ.
5. ಗುತ್ತಿಗೆ ಅವಧಿ 31.12.2008 ರವರೆಗೆ.
6) ಅಧಿಸೂಚನೆಯಲ್ಲಿ ಕಾಣಿಸಿದ ಪ್ರಮಾಣ ಅಂದಾಜು ಪ್ರಾಯಶಃ ಶೇಕಡ 20 ರಷ್ಟು ವ್ಯತ್ಯಾಸ ಆಗಬಹುದು.
7) ಭಾಗವಹಿಸಲು ಇಚ್ಛಿಸುವ ಗುತ್ತಿಗೆದಾರರು ಮರು ಟೆಂಡರ್ ದಿನಾಂಕದಂದು ಅಥವಾ ಅದಕ್ಕಿಂತ ಮೊದಲು ಮಾದರಿ ಜಿ.ಐ.ಪ್ಲೇಟ್‌ನ್ನು ಕೆಳಗೆ ಸಹಿ ಮಾಡಿರುವವರಲ್ಲಿ ಹಾಜರುಪಡಿಸುವುದು.

8) ಹೆಚ್ಚಿನ ಮಾಹಿತಿ ಬೇಕಾದಲ್ಲಿ ಕಛೇರಿಯ ಕೆಲಸದ ವೇಳೆಯಲ್ಲಿ ಪಡೆಯಬಹುದಾಗಿದೆ.

ಅರಣ್ಯ ಸಂರಕ್ಷಣಾಧಿಕಾರಿ,
ಪಿ.ಆರ್. 282 ಕಾರ್ಯಯೋಜನೆ ಮತ್ತು ಮೋಜಣಿ, ಶಿವಮೊಗ್ಗ.

**ಅರಣ್ಯ ಇಲಾಖೆ**

**ಕಾವೇರಿ ವನ್ಯಜೀವಿ ವಿಭಾಗ, ಕನಕಪುರ.**

**ಸಂಕ್ಷಿಪ್ತ ಮರು ಹರಾಜು ಇಸ್ತಿಹಾರ್ ಪ್ರಕಟಣೆ.**

**ಸಂ: ಎ4/ಹರಗಲು ಹರಾಜು/ಸಿಆರ್– 1 /2008–09, ದಿನಾಂಕ: 03ನೇ ಮೇ 2008**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಕಾವೇರಿ ವನ್ಯಜೀವಿ ವಿಭಾಗದ ಮಲ್ಲೈ ಮಹದೇಶ್ವರ ಬೆಟ್ಟ ವನ್ಯಜೀವಿ ವಲಯದ ವ್ಯಾಪ್ತಿಯಲ್ಲಿ ಬರುವ ವಿವಿಧ ಕಡಗಳ ವಾಹನ ನಿಲುಗಡೆ ಶುಲ್ಕ ಹಾಗೂ ವನ್ಯಧಾಮ ಪ್ರವೇಶ ಶುಲ್ಕ ವಸೂಲಿ ಮಾಡುವ ಕೆಲಸಕ್ಕೆ ದಿನಾಂಕ:29–04–2008 ರಂದು ಕರೆದಿದ್ದ ಹರಾಜಿನಲ್ಲಿ ಹೆಚ್ಚಿನ ಜನ ಭಾಗವಹಿಸದೆ ಹರಾಜಿನಲ್ಲಿ ತಗ್ಗುಬೆಲೆಗಿಂತ ಕಡಿಮೆ ಹರಾಜು ಕೂಗಿರುವುದರಿಂದ ಸರ್ಕಾರಕ್ಕೆ ಆಗಿರುವ ನಷ್ಟವನ್ನು ತಪ್ಪಿಸಲು ಮರು ಹರಾಜು ಪ್ರಕ್ರಿಯೆ ನಡೆಸಲು ದಿನಾಂಕ: 23–05–2008ಕ್ಕೆ ಮರು ಹರಾಜು ಪ್ರಕಟಣೆಯನ್ನು ಪ್ರಕಟಿಸಲು ಕರ್ನಾಟಕ ರಾಜ್ಯ ಪತ್ರದ ಹಾಗೂ ವಿವಿಧ ದಿನಪತ್ರಿಕೆಯಲ್ಲಿ ಹೆಚ್ಚಾಗಿ ಪ್ರಕಟಿಸಲು ಹರಾಜು ಪ್ರಕಟಣೆಗಳನ್ನು ಈ ಪತ್ರದ ಜೊತೆ ಲಗತ್ತಿಸಿ ಕಳುಹಿಸುತ್ತಾ ದಯವಿಟ್ಟು ಹರಾಜು ಇಸ್ತಿಯಾರನ್ನು ಪ್ರಕಟಿಸಲು ಕೋರಿದೆ. ಆಕಸ್ಮಿಕವಾಗಿ ಹರಾಜು ಪ್ರಕ್ರಿಯೆ ಆದಿನ ಯಶಸ್ವಿಯಾಗಿ ನಡೆಯದಿದ್ದಲ್ಲಿ ದಿನಾಂಕ: 30.05.2008 ರಂದು ಮರು ಹರಾಜು ಕರೆಯಲಾಗುವುದು ಹಾಗೂ 2008–09ನೇ ಸಾಲಿಗೆ ಪ್ರವಾಸಿಗರು ಮತ್ತು ಪ್ರಯಾಣಿಕರನ್ನು ಒಂದು ತೀರದಿಂದ ಮತ್ತೊಂದು ತೀರಕ್ಕೆ ಕರೆತರುವ ಕೆಲಸಕ್ಕೆ ನಿಗಧಿ ಪಡಿಸಿದ ದರದಂತೆ ಶುಲ್ಕ ವಸೂಲಿ ಮಾಡುವ ಕೆಲಸಕ್ಕೆ 2008–09ಕ್ಕೆ (01–06–2008 ರಿಂದ 31–05–2009 ವರೆಗೆ) ಸಾಲಿಗೆ ಹರಾಜು ಮಾಡಲು ಈ ಕೆಳಕಂಡಂತೆ ಸ್ಥಳ, ದಿನಾಂಕ ಮತ್ತು ಸಮಯವನ್ನು ನಿಗದಿಗೊಳಿಸಲಾಗಿದೆ. ಈ ಕೆಳಕಂಡ ನಿಬಂಧನೆಗಳಿಗೆ ಒಳಪಟ್ಟು ಸಾರ್ವಜನಿಕರು ಹರಾಜಿನಲ್ಲಿ ಭಾಗವಹಿಸಬಹುದಾಗಿರುತ್ತದೆ.

| ಕ್ರ. ಸಂ. | ವಲಯ | ಕಡದ ಹೆಸರು | ಹರಾಜು ನಡೆಯುವ ದಿನಾಂಕ ಮತ್ತು ವೇಳೆ | ಹರಾಜು ನಡೆಯುವ ಸ್ಥಳ |
|---|---|---|---|---|
| 1. | ಮಲ್ಲೈ ಮಹದೇಶ್ವರ ಬೆಟ್ಟ ವನ್ಯಜೀವಿ ವಲಯ | ಹೊಗೇನಕಲ್ ಕಡ (ಮಾರಿಕೊಟ್ಟಾಯಿ ಕಡ) ಹಾಗೂ ಇಂಜಿನ್ ಬೋಟ್ ನಡೆಸುವ ಹರಾಜು | 23–05–2008 ಮದ್ಯಾಹ್ನ 12:00 ಘಂಟೆ | ವಲಯ ಅರಣ್ಯಾಧಿಕಾರಿಗಳ ಕಛೇರಿ, ವನ್ಯಜೀವಿ ವಲಯ, ಮಲ್ಲೈ ಮಹದೇಶ್ವರ ಬೆಟ್ಟ. |
| | | ಆಲಂಬಾಡಿ ಕಡ | 23–05–2008 ಮದ್ಯಾಹ್ನ 12:30 ಘಂಟೆ | |
| | | ವನ್ಯಧಾಮ ಪ್ರವೇಶ ಶುಲ್ಕ | 23–05–2008 ಮದ್ಯಾಹ್ನ 1:00 ಘಂಟೆ | |
| | | ವನ್ಯಧಾಮ ಪ್ರವೇಶ ಮಾಡಿ ವಾಹನ ನಿಲುಗಡೆ ಶುಲ್ಕ | 23–05–2008 ಮದ್ಯಾಹ್ನ 1:30 ಘಂಟೆ | |

ನಿಗಧಿಪಡಿಸಿದ ಹರಾಜಿನ ದಿನಾಂಕಗಳಂದು ಹರಾಜಿನಲ್ಲಿ ಯಾರೂ ಭಾಗವಹಿಸದಿದ್ದಲ್ಲಿ ಅಥವಾ ಸಾರ್ವಜನಿಕ ರಜೆ ಎಂದು ಘೋಷಿತವಾದಲ್ಲಿ ಹರಾಜು ನಿಗಧಿಪಡಿಸಿದ ಸ್ಥಳ ಮತ್ತು ವೇಳೆಯಲ್ಲಿಯೇ ಮಲ್ಲೈ ಮಹದೇಶ್ವರ ಬೆಟ್ಟ ವನ್ಯಜೀವಿ ವಲಯಗಳ ವ್ಯಾಪ್ತಿಯ ಕಡಗಳ ಹರಾಜನ್ನು ಮುಂದಿನ ದಿನಾಂಕ ನಿಗಧಿಪಡಿಸುವವರೆಗೆ ಹರಾಜನ್ನು ಮುಂದೂಡಲಾಗುವುದು.

**ನಿಬಂಧನೆಗಳು:–**

1. ಹರಗಲು ಹರಾಜಿನಲ್ಲಿ ಭಾಗವಹಿಸುವವರು ಹರಾಜು ಪ್ರಾರಂಭವಾಗುವುದಕ್ಕೆ ಮುನ್ನ ರೂ.2500/– (ಎರಡು ಸಾವಿರದ ಐದುನೂರು) ರೂಗಳನ್ನು ಠೇವಣಿಯಾಗಿ ಪಾವತಿಸಿ ರಶೀದಿ ಪಡೆಯತಕ್ಕದ್ದು.
2. ಹರಾಜಿನಲ್ಲಿ ಭಾಗವಹಿಸಿ ಯಶಸ್ವಿಯಾದ ಬಿಡ್ಡುದಾರರು ತಮ್ಮ ಹೆಸರಿಗೆ ಹರಾಜು ನಿಂತ ಕೂಡಲೇ 7 ದಿನದ ಒಳಗಾಗಿ ಹರಾಜಿನ ಪೂರ್ಣ ಮೊತ್ತವನ್ನು ಪಾವತಿಸಿ ರಸೀದಿ ಪಡೆಯುವುದು. ತಪ್ಪಿದ್ದಲ್ಲಿ ಯಾವುದೇ ಮುನ್ಸೂಚನೇ ನೀಡದೆ ಹರಾಜನ್ನು ರದ್ದುಗೊಳಿಸಿ ಮುಂದಿನ ಕ್ರಮ ಕೈಗೊಳ್ಳಲಾಗುತ್ತದೆ.
3. ಹರಾಜು ಮಂಜೂರಾತಿ ಪಡೆಯದ ಹೊರತು ಯಶಸ್ವಿ ಬಿಡ್ಡುದಾರರು ಹರಗಲು ನಡೆಸಬಾರದು ಹಾಗೂ ಪ್ರಯಾಣದ ದರವನ್ನು ವಸೂಲು ಮಾಡಬಾರದು.
4. ಹರಾಜಿನ ಹಕ್ಕು ಪಡೆದವರು ಹರಗಲಿನಲ್ಲಿ ಪ್ರಯಾಣ ಮಾಡುವ ಪ್ರತಿ ಪ್ರಯಾಣಿಕರಿಂದ ರೂ.15.00/– (ಹದಿನೈದು) ಗಳನ್ನು ಮಾತ್ರ ವಸೂಲಿ ಮಾಡುವುದು. ಪ್ರಯಾಣಿಕರಿಗೆ ಮಾಹಿತಿಗಾಗಿ ನಿಗಧಿಪಡಿಸಿದ ದರವನ್ನು ಸೂಚನಾ ಫಲಕಗಳಲ್ಲಿ ಅಳವಡಿಸಬೇಕು.

5. ಹರಾಜನ್ನು ಈ ಕಛೇರಿಯಿಂದ ಧೃಡೀಕರಿಸಿಕೊಂಡು ಮಂಜೂರಾತಿ ಪಡೆದ ನಂತರ ಕಛೇರಿಯಲ್ಲಿ ಕರಾರು ಒಪ್ಪಂದ ಮಾಡಿಕೊಂಡ ಕಾರ್ಯಾದೇಶ ಪಡೆದು ಹರಗಲು ನಡೆಸುವುದು.
6. ಹರಗಲು ನಡೆಸುವ ಸಂದರ್ಭದಲ್ಲಿ ಸೂಕ್ತ ರಕ್ಷಣೆಯನ್ನು ಪ್ರಯಾಣಿಕರಿಗೆ ಒದಗಿಸುವುದು. ಆಕಸ್ಮಿಕವಾಗಿ ಸಂಭವಿಸಬಹುದಾದ ಅನಾಹುತಗಳಿಗೆ ಗುತ್ತಿಗೆದಾರರೇ ಜವಾಬ್ದಾರರಾಗಿರುತ್ತಾರೆ. ಇಲಾಖೆಯು ಯಾವುದೇ ಕಾರಣದಿಂದ ಜವಾಬ್ದಾರರಾಗುವುದಿಲ್ಲ. ಹರಗಲಿನ ಸಾಮರ್ಥ್ಯಕ್ಕೆ ತಕ್ಕಂತೆ ಪ್ರಯಾಣಿಕರನ್ನು ಮಾತ್ರ ಸಾಗಿಸುವುದು.
7. ಪ್ರಯಾಣಿಕರು ನದಿಯಲ್ಲಿ ಅಥವಾ ನದಿ ದಂಡೆಯಲ್ಲಿ ಮತ್ತು ವನ್ಯಧಾಮದಲ್ಲಿ ಯಾವುದೇ ಪ್ಲಾಸ್ಟಿಕ್ ವಸ್ತುಗಳನ್ನು ಹಾಗೂ ಬಾಟಲಿಗಳನ್ನು ಬಿಸಾಡುವುದು, ಪರಿಸರ ಮಾಲಿನ್ಯ ಮಾಡುವುದನ್ನು ಕಡ್ಡಾಯವಾಗಿ ನಿಷೇದಿಸಲಾಗಿದೆ. ಈ ಬಗ್ಗೆ ಪ್ರಯಾಣಿಕರಿಗೆ ಗುತ್ತಿಗೆದಾರರು ತಿಳುವಳಿಕೆ ನೀಡಿ ಪರಿಸರ ರಕ್ಷಣೆಯಲ್ಲಿ ಹೆಚ್ಚಿನ ತಿಳುವಳಿಕೆ ನೀಡುವುದು.
8. ಅರಣ್ಯದಲ್ಲಿ ಗುತ್ತಿಗೆದಾರರು ಯಾವುದೇ ಕಾನೂನು ಬಾಹಿರವಾದ ಕೃತ್ಯ ಹಾಗೂ ಚಟುವಟಿಕೆಗಳಲ್ಲಿ ಭಾಗಿಯಾದಲ್ಲಿ ಯಾವುದೇ ಮುನ್ಸೂಚನೆ ನೀಡದೆ ಗುತ್ತಿಗೆಯನ್ನು ರದ್ದು ಪಡಿಸಲಾಗುವುದು.
9. ಹರಗಲಿನಲ್ಲಿ ದ್ವಿಚಕ್ರ ಹಾಗೂ ಇತರೇ ವಾಹನಗಳನ್ನು ಮತ್ತು ಬೆಂಕಿ ಅಂಟಿಸುವ ಅಥವಾ ಸ್ಫೋಟಕ ವಸ್ತುಗಳನ್ನು ಸಾಗಿಸಬಾರದು, ಈ ಬಗ್ಗೆ ಇಲಾಖೆಯ ಗಮನಕ್ಕೆ ಬಂದಲ್ಲಿ ಗುತ್ತಿಗೆದಾರರ ಗುತ್ತಿಗೆಯನ್ನು ಯಾವ ಮುನ್ಸೂಚನೆಯನ್ನು ನೀಡದೇ ಗುತ್ತಿಗೆಯನ್ನು ರದ್ದುಪಡಿಸಲಾಗುವುದು.
10. ಪ್ರಯಾಣಿಕರನ್ನು ಬೆಳಿಗ್ಗೆ 6:00 ಗಂಟೆಯಿಂದ ಸಂಜೆ 6:00 ಗಂಟೆ0ಯುವರೆಗೆ ಮಾತ್ರ ಸಾಗಿಸಲು ಅನುಮತಿಸಲಾಗುವುದು.
11. ಹರಗಲಿಗೆ ವಿಮೆ ಮಾಡಿಸಿರಬೇಕು ಮತ್ತು ಅದು ಚಾಲ್ತಿಯಲ್ಲಿರಬೇಕು.
12. ಅರಣ್ಯ ಅಪರಾಧ ತಡೆಯಲು ಮತ್ತು ಅರಣ್ಯ ಬೆಂಕಿ ತಡೆ0ಯಲು ಇಲಾಖೆಗೆ ಸಹಕರಿಸತಕ್ಕದ್ದು.
13. ಹರಗಲಿನಲ್ಲಿ ಪ್ರಯಾಣಿಕರನ್ನು ಕರೆದೊಯ್ಯುವ ಸಂದರ್ಭದಲ್ಲಿ ಅವರಿಗೆ ಕಡ್ಡಾಯವಾಗಿ ರಕ್ಷಣಾ ಕವಚಗಳನ್ನು (Life jackets) ಒದಗಿಸತಕ್ಕದ್ದು.
14. ಮಲೈ ಮಹದೇಶ್ವರ ಬೆಟ್ಟ ವನ್ಯಜೀವಿ ವಲಯದ ಹೊಗೇನಕಲ್ ಕಡದಲ್ಲಿ ಒಂದು ಇಲಾಖಾ ಇಂಜಿನ್ ಬೋಟನ್ನು ನೀಡಲಾಗುವುದು, ಈ ಬೋಟಿಗೆ ಇಂಧನ, ರಿಪೇರಿ ಮತ್ತು ನಿರ್ವಹಣಾ ಖರ್ಚುಗಳನ್ನು ಗುತ್ತಿಗೆದಾರರೇ ಭರಿಸಬೇಕಾಗುತ್ತದೆ.
15. ಹರಾಜು/ ಟೆಂಡರ್ ಅವಧಿ ಮುಗಿದ ನಂತರ ಇಲಾಖಾ ಇಂಜಿನ್ ಬೋಟನ್ನು ಇಲಾಖಾ ವಶಕ್ಕೆ ನೀಡಬೇಕು.
16. ಇಂಜಿನ್ ಬೋಟ್ ನಡೆಸುವ ಯಶಸ್ವಿ ಬಿಡ್ಡುದಾರರು ಕರಾರು ಒಪ್ಪಂದ ಮಾಡಿಕೊಳ್ಳುವ ಸಮಯದಲ್ಲಿ ರೂ. 25000/– (ಇಪ್ಪತ್ತೈದು ಸಾವಿರ ಮಾತ್ರ) ಗಳ ಠೇವಣಿ ಹಣ ಇಡಬೇಕಾಗುತ್ತದೆ. ಈ ಠೇವಣಿ ಹಣವನ್ನು ಗುತ್ತಿಗೆ ಅವಧಿ ಮುಗಿದು ಇಂಜಿನ್ ಬೋಟ್ ಇಲಾಖಾ ವಶಕ್ಕೆ ಪಡೆದ ನಂತರ ಹಿಂತಿರುಗಿಸಲಾಗುವುದು.
17. ಹರಗಲು / ಇಂಜಿನ್ ಬೋಟ್ ನಡೆಸುವ ಸಮಯದಲ್ಲಿ ಯಾವುದಾದರೂ ಅನಾಹುತಗಳು ಸಂಭವಿಸಿದಲ್ಲಿ ಗುತ್ತಿಗೆದಾರರು ನೇರವಾಗಿ ಜವಾಬ್ದಾರರಾಗದಿದ್ದಲ್ಲಿಯೂ ಸಹ ಈ ಅನಾಹುತಗಳಿಗೆ ಗುತ್ತಿಗೆದಾರರೇ ಜವಾಬ್ದಾರರಾಗಿರುತ್ತಾರೆ, ಈ ಅನಾಹುತಗಳಿಗೆ ಅರಣ್ಯ ಇಲಾಖೆ ಯಾವುದೇ ರೀತಿಯಲ್ಲಿ ಜವಾಬ್ದಾರಿಯಾಗುವುದಿಲ್ಲ.
18. ಸದರಿ ಹರಾಜು ಪ್ರಕ್ರಿಯೆಯನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಕಾವೇರಿ ವನ್ಯಜೀವಿ ವಿಭಾಗ, ಕನಕಪುರ ರವರು ಅಥವಾ ಇವರಿಂದ ನೇಮಿಸಲ್ಪಟ್ಟ ಯಾವುದೇ ಅಧಿಕಾರಿಗಳು ನಡೆಸುತ್ತಾರೆ.
19. ಹರಾಜನ್ನು ಕಾರಣ ನೀಡದೆ ಒಪ್ಪುವ/ ಅಥವಾ ತಿರಸ್ಕರಿಸುವ ಹಕ್ಕನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಕಾವೇರಿ ವನ್ಯ ಜೀವಿ ವಿಭಾಗ, ಕನಕಪುರ ಇವರಿಗೆ ಕಾಯ್ದಿರಿಸಲಾಗಿದೆ.
20. ಹರಾಜಿನ ಬಗ್ಗೆ ತಂಟೆ ತಕರಾರುಗಳು ಬಂದಲ್ಲಿ ಅಧಿಕಾರಿಗಳು ಅರಣ್ಯ ಸಂರಕ್ಷಣಾಧಿಕಾರಿಗಳು, ಚಾಮರಾಜನಗರ ವೃತ್ತ, ಚಾಮರಾಜನಗರ. ಇವರ ತೀರ್ಮಾನವು ಅಂತಿಮವಾಗಿರುತ್ತದೆ. ಇದಕ್ಕೆ ಗುತ್ತಿಗೆದಾರರು ಬದ್ಧರಾಗಿರತಕ್ಕದ್ದು.

ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,
ಕಾವೇರಿ ವನ್ಯಜೀವಿ ವಿಭಾಗ,
ಕನಕಪುರ.

ಪಿ.ಆರ್. 274

**AGRICULTURE & HORTICULTURE DEPARTMENT**
**STATE TENDER BULLETIN**
**No:AHD/01/AMS/2008, Dated: 22nd April 2008**

Following Tender Notification is Published as a part of the State Tender Bulletin for the second week of April 2008.

**V. KUMAR**
State Tender Bulletin Officer and Deputy Secretary,
Agriculture & Horticulture Department,
M.S. Building IV Floor, Bangalore-1

## ಕೃಷಿ ಇಲಾಖೆ

## ಕೃಷಿ ಆಯುಕ್ತರ ಕಾರ್ಯಾಲಯ, ಶೇಷಾದ್ರಿ ರಸ್ತೆ, ಬೆಂಗಳೂರು–1

### ಟೆಂಡರ್ ಪ್ರಕಟಣೆ

**ಸಂ: ಸಾಗೊವಿ/ದಕ/2008–09, ದಿನಾಂಕ: 22ನೇ ಏಪ್ರಿಲ್ 2008**

**ವಿಷಯ:** 2008–09ನೇ ಸಾಲಿನಲ್ಲಿ ಕೃಷಿ ಇಲಾಖೆಯ ವಿವಿಧ ಕಾರ್ಯಕ್ರಮಗಳಡಿ ಜೈವಿಕ ಗೊಬ್ಬರಗಳು, VAM-ಜೈವಿಕ ಗೊಬ್ಬರ, ದ್ರವ ರೂಪದ ಜೈವಿಕ ಗೊಬ್ಬರಗಳು, ಹಸಿರೆಲೆ ಗೊಬ್ಬರ ಬೀಜಗಳು, ಲಘುಪೋಷಕಾಂಶಗಳು, ಕೃಷಿ ಸುಣ್ಣ ಮತ್ತು ಜಿಪ್ಸಂಗಳನ್ನು ಸರಬರಾಜಿಗಾಗಿ ದರಕರಾರು ಮಾಡಲು ಟೆಂಡರ್ ಆಹ್ವಾನಿಸುವ ಬಗ್ಗೆ.

2008–09ನೇ ಸಾಲಿನಲ್ಲಿ ಕೃಷಿ ಇಲಾಖೆಯ ವಿವಿಧ ಯೋಜನೆಗಳಡಿಯಲ್ಲಿ ಜೈವಿಕ ಗೊಬ್ಬರಗಳು, ದ್ರವರೂಪದ ಜೈವಿಕ ಗೊಬ್ಬರಗಳು, VAM-ಜೈವಿಕ ಗೊಬ್ಬರ, ಹಸಿರೆಲೆ ಗೊಬ್ಬರ ಬೀಜಗಳು, ಲಘುಪೋಷಕಾಂಶಗಳು, ಕೃಷಿ ಸುಣ್ಣ ಮತ್ತು ಜಿಪ್ಸಂಗಳನ್ನು ರೈತರಿಗೆ ವಿತರಿಸಲು ಇಲಾಖೆಯಲ್ಲಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿದೆ. ಈ ಉದ್ದೇಶಕ್ಕಾಗಿ ಇಲಾಖೆಯ ವಿವಿಧ ಕಾರ್ಯಕ್ರಮಗಳಡಿ ಒಟ್ಟಾರೆ ಅಂದಾಜು ಮೊತ್ತ ರೂ.400.00 ಲಕ್ಷಗಳನ್ನು ಒದಗಿಸಿಕೊಳ್ಳಲಾಗಿದೆ. ದರಕರಾರಿನಡಿ ಸರಬರಾಜು ಮಾಡಲು ಮೊಹರಾದ ಟೆಂಡರ್ (ಟೆಕ್ನಿಕಲ್ ಮತ್ತು ಕಮರ್ಷಿಯಲ್ ಬಿಡ್ ಪ್ರತ್ಯೇಕವಾಗಿ)ಗಳನ್ನು ಆಸಕ್ತ ಉತ್ಪಾದಕರಿಂದ ಮಾತ್ರ ಕರೆಯಲಾಗಿದೆ.

ಖಾಲಿ ಟೆಂಡರ್ ಫಾರಂಗಳನ್ನು ಉಪ ಕೃಷಿ ನಿರ್ದೇಶಕರು (ರಸಗೊಬ್ಬರ ಮತ್ತು ಸಾವಯವ ಗೊಬ್ಬರ), ಕೃಷಿ ಆಯುಕ್ತರ ಕಾರ್ಯಲಯ, ಶೇಷಾದ್ರಿ ರಸ್ತೆ, ಬೆಂಗಳೂರು–560 001 ಇಲ್ಲಿ ಟೆಂಡರ್ ಅರ್ಜಿ ಶುಲ್ಕ ರೂ. 200.00 ಅನ್ನು ಕೃಷಿ ನಿರ್ದೇಶಕರು, ಬೆಂಗಳೂರು ಇವರ ಹೆಸರಿನಲ್ಲಿ ತೆಗೆದ ಡಿಡಿ ರೂಪದಲ್ಲಾಗಲೀ ಅಥವಾ ನಗದು ರೂಪದಲ್ಲಿ ಪಾವತಿ ಮಾಡಿ ಪಡೆಯಬಹುದಾಗಿದೆ. ಖಾಲಿ ಟೆಂಡರ್ ಫಾರಂಗಳನ್ನು ದಿನಾಂಕ:15.04.2008 ರಿಂದ ದಿನಾಂಕ:12.06.2008 ರವರೆಗೆ ಕೆಲಸದ ದಿನಗಳಲ್ಲಿ ಬೆಳಿಗ್ಗೆ 10.00 ಗಂಟೆಯಿಂದ ಸಂಜೆ 5.00 ಗಂಟೆಯವರೆಗೆ ಪಡೆಯಬಹುದು. ನೋಂದಣಿ ಅಂಚೆ ಮೂಲಕ ಖಾಲಿ ಟೆಂಡರ್ ಫಾರಂ ಪಡೆಯಲು ಟೆಂಡರ್ ಫಾರಂ ಶುಲ್ಕ ರೂ. 200/– ರೊಂದಿಗೆ ಅಂಚೆ ಶುಲ್ಕ ರೂ.35/– ಗಳನ್ನು ಕೃಷಿ ನಿರ್ದೇಶಕರು, ಬೆಂಗಳೂರು ಇವರ ಹೆಸರಿನಲ್ಲಿ ತೆಗೆದ ಡಿಡಿ ರೂಪದಲ್ಲಿ ಮಾತ್ರ ಕಳುಹಿಸಬೇಕು. ಭರ್ತಿ ಮಾಡಿದ ಅರ್ಜಿಗಳನ್ನು ಸಲ್ಲಿಸಲು ಕೊನೆಯ ದಿನಾಂಕ:13.06.2008 ರಂದು ಸಂಜೆ 5.00 ಗಂಟೆಯ ವರೆಗೆ.

ಇ.ಎಂ.ಡಿ ಮೊತ್ತ ಪ್ರತಿ ಪರಿಕರಕ್ಕೆ ರೂ. 50000/– (ಐವತ್ತು ಸಾವಿರ ರೂಪಾಯಿಗಳು ಮಾತ್ರ)ವನ್ನು ಯಾವುದಾದರೂ ಷೆಡ್ಯೂಲ್ಡ್ ರಾಷ್ಟ್ರೀಕೃತ ಬ್ಯಾಂಕಿನಲ್ಲಿ ಉಪ ಕೃಷಿ ನಿರ್ದೇಶಕರು (ರಸಗೊಬ್ಬರ ಮತ್ತು ಸಾವಯವ ಗೊಬ್ಬರ), ಕೃಷಿ ಆಯುಕ್ತರ ಕಾರ್ಯಾಲಯ, ಶೇಷಾದ್ರಿ ರಸ್ತೆ, ಬೆಂಗಳೂರು 560 001 ಇವರ ಹೆಸರಿನಲ್ಲಿ ತೆಗೆಯಲಾದ 15 ತಿಂಗಳ ಅವಧಿಯ ನಿಗಧಿತ ನಮೂನೆಯ ಬ್ಯಾಂಕ್ ಗ್ಯಾರಂಟಿಯೊಂದಿಗೆ ಮೊಹರಾದ ಟೆಂಡರ್‌ಗಳನ್ನು ಕೃಷಿ ನಿರ್ದೇಶಕರ ಕಛೇರಿ, ಬೆಂಗಳೂರು ಇಲ್ಲಿ ಸ್ವೀಕರಿಸಲು ಕಡೆಯ ದಿನಾಂಕ:13.06.2008 ರಂದು ಸಂಜೆ 5.00 ಗಂಟೆಯವರೆಗೆ ಇರುತ್ತದೆ. ದಿನಾಂಕ:16.06.2008 ರಂದು ಬೆಳಿಗ್ಗೆ 11.00 ಗಂಟೆಗೆ ಕೃಷಿ ಆಯುಕ್ತರ ಕಾರ್ಯಾಲಯದ ಸಭಾಂಗಣದಲ್ಲಿ ಟೆಂಡರ್ ಪರಿಶೀಲನಾ ಸಮಿತಿಯ ಸಮ್ಮುಖದಲ್ಲಿ ಮೊಹರಾದ ಟೆಂಡರ್‌ಗಳನ್ನು ತೆರೆಯಲಾಗುವುದು.

ಪಿ.ಆರ್. 266 ಕೃಷಿ ನಿರ್ದೇಶಕರು.

## ಅರಣ್ಯ ಇಲಾಖೆ

## ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ

### ಹರಾಜು ಪ್ರಕಟಣೆ

**ಕ್ರ:ಎ5/ಎಸ್ ಎಎಸ್/ ಸಿಆರ್/1/08–09, ಸಾಗರ, ದಿನಾಂಕ: 2ನೇ ಮೇ 2008**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಬಯಸುವುದೇನೆಂದರೆ, ಸಾಗರ ಅರಣ್ಯ ವಿಭಾಗದ ಈ ಕೆಳಗೆ ನಮೂದಿಸಿದ ಸರ್ಕಾರಿ ನಾಟಾ ಸಂಗ್ರಹಾಲಯಗಳಲ್ಲಿ ಲಭ್ಯವಿರುವ ಬೀಟೆ, ಸಾಗುವಾನಿ ಹಾಗೂ ಇತರೆ ಜಾತಿಯ ನಾಟಾ, ಸೌದೆ, ಎಳೆ ಇತ್ಯಾದಿಗಳನ್ನು ಆಯಾ ಡಿಪೋವಿನ ಎದುರು ಸೂಚಿಸಿದ ದಿನಾಂಕಗಳಂದು ಬಹಿರಂಗ ಹರಾಜು ಮಾರಾಟದಲ್ಲಿ ವಿಕ್ರಯಿಸಲು ಸಾಮಾನ್ಯ ಅವಗಾಹನೆಗಾಗಿ ಪ್ರಕಟಿಸಿದೆ.

| ಕ್ರ. ಸಂ. | ನಾಟಾ ಸಂಗ್ರಹಾಲಯದ ಹೆಸರು | ಹರಾಜಿನ ದಿನಾಂಕ ಮತ್ತು ವೇಳೆ | ಹರಾಜಿಗಿಟ್ಟ ದಾಸ್ತಾನು ವಿವರ (ಎಂ3ಗಳಲ್ಲಿ) | | ಷರಾ |
|---|---|---|---|---|---|
| 1) | ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ | 30.05.2008 ಸಮಯ ಬೆಳಿಗ್ಗೆ 10.00 ರಿಂದ ಹರಾಜು ಮುಗಿಯುವವರೆಗೆ | ಬೀಟೆ | 13.716 | |
| | | | ಸಾಗುವಾನಿ | 8.348 | |
| | | | ಜಂಬೆ | 161.701 | |
| | | | ಹುನಾಲು | 41.651 | |
| | | | ಮತ್ತಿ | 6.848 | |
| | | | ನಂದಿ | 22.913 | |
| | | | ಹೊನ್ನೆ | 3.538 | |

| ಕ್ರ. ಸಂ. | ನಾಟಾ ಸಂಗ್ರಹಾಲಯದ ಹೆಸರು | ಹರಾಜಿನ ದಿನಾಂಕ ಮತ್ತು ವೇಳೆ | ಹರಾಜಿಗಿಟ್ಟ ದಾಸ್ತಾನು ವಿವರ (ಎಂ3ಗಳಲ್ಲಿ) | | ಷರಾ |
|---|---|---|---|---|---|
| | | | ಇತರೆ ಜಾತಿ ನಾಟಾ | 49.734 | |
| | | | ಅಕೇಶಿಯಾ ನಾಟಾ | 263.126 | |
| | | | ನೀಲಗಿರಿ ನಾಟಾ | 70.356 | |
| | | | ಅಕೇಶಿಯಾ ಪೋಲ್ಸ್ | 1646 ನಂ. | |
| | | | ಸೌದೆ | 521.909 | |
| 2) | ಸರ್ಕಾರಿ ನಾಟಾ ಸಂಗ್ರಹಾಲಯ, ಹೊಸನಗರ | 02.06.2008 ಸಮಯ ಬೆಳಿಗ್ಗೆ 10.00 ರಿಂದ ಹರಾಜು ಮುಗಿಯುವವರೆಗೆ | ಬೀಟೆ | 9.639 | |
| | | | ಹೊನ್ನೆ | 10.250 | |
| | | | ಜಂಬೆ | 8.792 | |
| | | | ಮತ್ತಿ | 11.039 | |
| | | | ನಂದಿ | 10.795 | |
| | | | ಇತರೆ | 49.485 | |
| | | | ಅಕೇಶಿಯಾ ನಾಟಾ | 160.000 | |
| | | | ಅಕೇಶಿಯಾ ಬಿಲ್ಲೆಟ್ಸ್ | 238.000 | |
| | | | ಅಕೇಶಿಯಾ ಎಳೆ | 150 ನಂ. | |
| | | | ಕಾಡುಜಾತಿ ಸೌದೆ | 13.000 | |
| 3) | ಸರ್ಕಾರಿ ನಾಟಾ ಸಂಗ್ರಹಾಲಯ, ಆನವಟ್ಟಿ | 03.06.2008 ಸಮಯ ಬೆಳಿಗ್ಗೆ 10.00 ರಿಂದ ಹರಾಜು ಮುಗಿಯುವವರೆಗೆ | ಬೀಟೆ | 8.350 | |
| | | | ಸಾಗುವಾನಿ | 8.470 | |
| | | | ಮತ್ತಿ | 5.500 | |
| | | | ರಂಜ | 13.890 | |
| | | | ಭರಣಿಗೆ | 11.200 | |
| | | | ಕಾಡುಜಾತಿ | 31.810 | |
| | | | ನೀಲಗಿರಿ | 9.200 | |
| | | | ಅಕೇಶಿಯಾ | 128.800 | |
| | | | ಸೌದೆ | 170.000 | |
| | | | ಅಕೇಶಿಯಾ ಎಳೆ | 500 ನಂ. | |

ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ.

ಪಿ.ಆರ್. 273

## ಉಪ ಕೃಷಿ ನಿರ್ದೇಶಕರ ಕಛೇರಿ, ರಾಜ್ಯ ಪೀಡೆನಾಶಕ ಪರೀಕ್ಷಣಾ ಪ್ರಯೋಗಶಾಲೆ, ಶಿವಮೊಗ್ಗ

## ಟೆಂಡರ್ ಕಂ ಬಹಿರಂಗ ಹರಾಜು ಪ್ರಕಟಣೆ

**ಸಂ: ಕೃ ಅ–1/ಅ ಜ ವ/ ವಿವ 1/08–09, ದಿನಾಂಕ: 29ನೇ ಏಪ್ರಿಲ್ 2008**

**ವಿಷಯ:** ಉಪ ಕೃಷಿ ನಿರ್ದೇಶಕರ (ಪೀಡೆನಾಶಕ ಪರೀಕ್ಷಣಾ ಪ್ರಯೋಗಶಾಲೆ) ಶಿವಮೊಗ್ಗ ಇವರ ಕಛೇರಿಯಲ್ಲಿರುವ ಅನುಪಯುಕ್ತ ಸಾಮಗ್ರಿಗಳನ್ನು ಟೆಂಡರ್ ಕಂ ಬಹಿರಂಗ ಹರಾಜಿನ ಮೂಲಕ ವಿಲೇ ಮಾಡುವ ಬಗ್ಗೆ.

**ಉಲ್ಲೇಖ:** ಕೃಷಿ ನಿರ್ದೇಶಕರು, ಬೆಂಗಳೂರು ಇವರ ಅನುಮತಿ ಆದೇಶ ಸಂ: ಸಾಮಾನ್ಯ/ಜ ವ/ಅನುಪ/135/07–08 ದಿನಾಂಕ: 12.3.2008.

ಈ ಕಛೇರಿಯಲ್ಲಿರುವ ಕೆಳಕಂಡ ಅನುಪಯುಕ್ತ ವಸ್ತುಗಳನ್ನು, ಅವು ಹೇಗಿವೆಯೋ ಹಾಗೆ, ದಿನಾಂಕ: 30.7.08 ಅಪರಾಹ್ನ 3.00 ಗಂಟೆಗೆ ಈ ಕಛೇರಿ ಆವರಣದಲ್ಲಿ ಟೆಂಡರ್ ಕಂ ಬಹಿರಂಗ ಹರಾಜು ಮಾಡಲಾಗುವುದು.

ಆಸಕ್ತರು ಟೆಂಡರ್ ಕಂ ಬಹಿರಂಗ ಹರಾಜಿನಲ್ಲಿ ನಿಗದಿತ ಠೇವಣಿ ಹಣ ಪಾವತಿಸಿ ನಿಯಮಾನುಸಾರ ಭಾಗವಹಿಸಲು ಕೋರಲಾಗಿದೆ.

| ಕ್ರ. ಸಂ. | ವಸ್ತುವಿನ ವಿವರ | ಸಂಖ್ಯೆ | ವಿಕ್ರಯದ ಮಾದರಿ | ಸ್ಥಳ |
|---|---|---|---|---|
| 1 | ಗೋದ್ರೇಜ್ ಪ್ರಿಂಟರ್ | 2 | ಹರಾಜು | ಉಪ ಕೃಷಿ ನಿರ್ದೇಶಕರು ಪೀಡೆನಾಶಕ ಪರೀಕ್ಷಣಾ ಪ್ರಯೋಗಶಾಲೆ ಶಿವಮೊಗ್ಗ. |
| 2 | ಗ್ಯಾಸ್ ಕ್ರೊಮಾಟೊಗ್ರಾಫ್ (ಜಿ.ಸಿ) ಮಾಡೆಲ್ – 8510 ಕ್ರ ಸಂ 1260 / 0396 | 1 | – " – | – " – |

| ಕ್ರ. ಸಂ. | ವಸ್ತುವಿನ ವಿವರ | ಸಂಖ್ಯೆ | ವಿಕ್ರಯದ ಮಾದರಿ | ಸ್ಥಳ |
|---|---|---|---|---|
| 3 | ಇಂಟಿಗ್ರೇಟರ್ (ಪಿ.ಸಿ) | 1 | – " – | – " – |
| 4 | ಯು.ಪಿ.ಎಸ್. ಸಿಸ್ಟಂ (5 ಕೆ.ವಿ.ಎ ಸಾಮರ್ಥ್ಯ) | 2 | – " – | – " – |
| 5 | ಗ್ಯಾಸ್ ಕ್ರೊಮಾಟೊಗ್ರಫಿ ಸಿರಿಂಜ್‌ಗಳು (10 ಮೈಲೀ ಕೆಪಾಸಿಟಿ ನೀಡಲ್) | 2 | – " – | – " – |

ಮೇಲ್ಕಂಡ ಸಾಮಾಗ್ರಿಗಳನ್ನು ಕಛೇರಿಯ ವೇಳೆಯಲ್ಲಿ ಅಂದರೆ ಬೆಳಿಗ್ಗೆ 10–00 ರಿಂದ ಸಾಯಂಕಾಲ 5.30 ಗಂಟೆಯವರೆಗೆ ಪರಿಶೀಲಿಸಬಹುದಾಗಿದೆ.

**ಟೆಂಡರ್ ಕಂ ಹರಾಜಿನ ಷರತ್ತುಗಳು**

1) ಮೊಹರು ಮಾಡಿದ ಟೆಂಡರ್ ಲಕೋಟೆಯನ್ನು (ಸೀಲ್ಡ್ ಕವರ್) ಉಪ ಕೃಷಿ ನಿರ್ದೇಶಕರು, ಪೀಡೆನಾಶಕ ಪರೀಕ್ಷಣಾ ಪ್ರಯೋಗಶಾಲೆ, ಹಳೇ ತೀರ್ಥಹಳ್ಳಿ ರಸ್ತೆ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಇವರ ವಿಳಾಸಕ್ಕೆ ಕಳುಹಿಸಬೇಕು. ಲಕೋಟೆಯ ಮೇಲೆ "ನಿರುಪಯುಕ್ತ ವಸ್ತುಗಳ ಖರೀದಿ ಬಗ್ಗೆ" ಎಂದು ಬಿಡಿ ಅಕ್ಷರಗಳಲ್ಲಿ ನಮೂದಿಸಬೇಕು.
2) ಹರಾಜಿನಲ್ಲಿ ಭಾಗವಹಿಸುವವರು ರೂ 8000/– (ರೂಪಾಯಿ ಎಂಟು ಸಾವಿರ ಮಾತ್ರ) ಮೊತ್ತವನ್ನು EMD ಆಗಿ ಹರಾಜು ಪೂರ್ವದಲ್ಲಿ ನಗದಾಗಿ ಕಛೇರಿಯಲ್ಲಿ ಠೇವಣಿ ಇಡಬೇಕು.
3) ಹರಾಜಿನಲ್ಲಿ ಜಯಶೀಲರಾದವರು ಹರಾಜು ಮೊತ್ತದ ಶೇ 25 ರಷ್ಟು ಮೊತ್ತವನ್ನು ತಕ್ಷಣ ಪಾವತಿಸುವುದು. ಈ ಮೊತ್ತಕ್ಕೆ ಬಡ್ಡಿ ನೀಡಲಾಗುವುದಿಲ್ಲ. ಉಳಿದ ಮೊತ್ತವನ್ನು ಮೇಲಾಧಿಕಾರಿಗಳಿಂದ ಅನುಮೋದನೆ ಬಂದ ನಂತರ, ಈ ಕಛೇರಿಯಿಂದ ನೀಡಲಾಗುವ ದೃಡ ಪತ್ರ ತಲುಪಿದ 10 ದಿವಸದೊಳಗೆ ಪಾವತಿ ಮಾಡಬೇಕು. ತೆರಿಗೆಯೊಂದಿಗೆ ಪಾವತಿ ಮಾಡುವುದು (ತೆರಿಗೆ ಮೊತ್ತವನ್ನು ಮಾರಾಟ ದಿನದಂದು ಅನ್ವಯಿಸುವಂತೆ ಪ್ರತ್ಯೇಕವಾಗಿ ವಿಧಿಸಲಾಗುವುದು).
4) ಹರಾಜಿನ ಸಾಮಾನನ್ನು ತಮ್ಮ ಸ್ವಂತ ವ್ಯವಸ್ಥೆಯ ಮೂಲಕ ತೆಗೆದುಕೊಂಡು ಹೋಗತಕ್ಕದ್ದು.
5) ಮೇಲಾಧಿಕಾರಿಗಳು ಅನುಮತಿ ನೀಡದ ಹೊರತು ಹರಾಜಿನ ವಸ್ತುಗಳನ್ನು ಹಸ್ತಾಂತರ ಮಾಡಲಾಗುವುದಿಲ್ಲ.
6) ಹರಾಜಿನಲ್ಲಿ ಹೆಚ್ಚು ಬಿಡ್ ಮಾಡಿರುವವರನ್ನು ಬಿಟ್ಟು ಉಳಿದವರಿಗೆ ಹರಾಜು ಪ್ರಕ್ರಿಯೆ ಮುಗಿದ ನಂತರ ಠೇವಣಿ ಮೊತ್ತ ಹಿಂದಿರುಗಿಸಲಾಗುವುದು.
7) ಹರಾಜು ಪ್ರಕ್ರಿಯೆಯನ್ನು ಒಪ್ಪುವ ಅಥವಾ ತಿರಸ್ಕರಿಸುವ ಹಕ್ಕನ್ನು ಈ ಕಛೇರಿಯ ಮುಖ್ಯಾಧಿಕಾರಿಗಳು ಹೊಂದಿರುತ್ತಾರೆ.
8) ಉಪ ಕೃಷಿ ನಿರ್ದೇಶಕರು (ಪೀ ಪ ಪ್ರ) ಶಿವಮೊಗ್ಗ ಇವರು, ಜಂಟಿ ಕೃಷಿ ನಿರ್ದೇಶಕರು, ಶಿವಮೊಗ್ಗ ಇವರ ಕಛೇರಿಯಿಂದ ನೇಮಿಸಲ್ಪಟ್ಟ ಒಬ್ಬರು ಪತ್ರಾಂಕಿತ ಅಧಿಕಾರಿಯ ಉಸ್ತುವಾರಿಯಲ್ಲಿ, ಬಹಿರಂಗ ಹರಾಜು ಪ್ರಕ್ರಿಯೆ ನಡೆಸುವರು.

ಉಪ ಕೃಷಿ ನಿರ್ದೇಶಕರು,
ರಾಜ್ಯ ಪೀಡೆನಾಶಕ ಪರೀಕ್ಷಣಾ ಪ್ರಯೋಗಶಾಲೆ,
ಶಿವಮೊಗ್ಗ.

ಪಿ.ಆರ್. 275

**LAW, JUSTICE & HUMAN RIGHTS DEPARTMENT**

**NOTIFICATION**

**No. LAW 74 LAC 2006, Bangalore, Dated: 22nd June 2007**

Shri **Gireyya** Who is working as Civil Judge (Junior Division) in the Judicial Department is permitted to change his name as **'G.R.Patil'**

By Order and in the name of the Governor of Karnataka,

**E. SHIVANANDA**

Under Secretary to Government (Admn-I)

Law, Justice & Human Rights Department.

P.D. 39

**ಉಪ ಅರಣ್ಯ ಸಂರಕ್ಷಣಾಧಿಕಾರಿಯವರ ಕಛೇರಿ, ಭದ್ರಾವತಿ**

**ಸಂಕ್ಷಿಪ್ತ ಹರಾಜು ಪ್ರಕಟಣೆ**

**ಸಂಖ್ಯೆ:ಬಿ1–ಬನಾಹ–ಸಿಆರ್–1/08–09, ದಿನಾಂಕ: 30ನೇ ಏಪ್ರಿಲ್ 2008**

ಈ ಮೂಲಕ ಸಾರ್ವಜನಿಕರಿಗೆ ತಿಳಿಸುವುದೇನೆಂದರೆ ತರೀಕೆರೆ ಸರ್ಕಾರಿ ನಾಟಾ ಸಂಗ್ರಹಾಲಯದಲ್ಲಿರುವ ನಾಟಾಗಳನ್ನು ಅನುಸೂಚಿಯಲ್ಲಿ ಸೂಚಿಸಿರುವಂತೆ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಭದ್ರಾವತಿ ವಿಭಾಗ, ಭದ್ರಾವತಿ

ಇವರು ದಿನಾಂಕ 4.6.2008 ರ ಬೆಳಿಗ್ಗೆ 9.00 ಗಂಟೆಗೆ ಈ ಕೆಳಗೆ ನಮೂದಿಸಿದ ಷರತ್ತಿಗೊಳಪಟ್ಟು ಹಾಗೂ ಸವಿಸ್ತಾರ ಹರಾಜು ಪ್ರಕಟಣೆ ನಿಬಂಧನೆಗಳ ಪ್ರಕಾರ ಬಹಿರಂಗ ಹರಾಜು ಮಾಡುವರು.

| ಕ್ರ. ಸಂ. | ಜಾತಿ | ಅಂದಾಜು ಪ್ರಮಾಣ – ಎಂ 3 ನಲ್ಲಿ | |
|---|---|---|---|
| 1 | ಬೀಟೆ | 40.000 | 60,000 |
| 2 | ಸಾಗುವಾನಿ | 50.000 | – |
| 3 | ಇತರೆ ಜಾತಿ | 350.000 | – |
| 4 | ಪೋಲ್ಸ್ | 50 ನಂ. | – |

**ಷರತ್ತುಗಳು**

1. ನಾಟಾ ಹರಾಜಿನಲ್ಲಿ ಭಾಗವಹಿಸುವ ಪ್ರತಿಯೊಬ್ಬ ಸವಾಲುದಾರರು 20000 ರೂ. ಮೌಲ್ಯದ ಮರ ಖರೀದಿಗೆ ಕನಿಷ್ಟ 5000 ರೂ.ಗಳನ್ನು ಮತ್ತು ರೂ. 20000 ಮೀರಿದ ಮೌಲ್ಯಕ್ಕೆ 20000 ರೂ.ಗಳನ್ನು ಮುಂಗಡವಾಗಿ ಠೇವಣಿಯಾಗಿ ಕಟ್ಟಬೇಕು.
2. ಹರಾಜಿನ ದಿನವೇ ಒಟ್ಟು ಹರಾಜಿನ ಮೌಲ್ಯದ ಕಾಲುಭಾಗ ಹಣ ಮತ್ತು ಅನ್ವಯಿಸುವ ಎಲ್ಲಾ ತೆರಿಗೆಗಳನ್ನು ಕೆಳಕಂಡಂತೆ ಅಥವಾ ಹರಾಜಿನ ದಿನದಂದು ಚಾಲ್ತಿಯಲ್ಲಿರುವಂತೆ ಪೂರ್ಣವಾಗಿ ಪಾವತಿಸಬೇಕು. ಉಳಿದ ಮುಕ್ಕಾಲು ಭಾಗ ಹಣವನ್ನು ಹರಾಜು ದಿನಾಂಕದಿಂದ 60 ದಿನಗಳೊಳಗೆ ಪಾವತಿಸಿ 90 ದಿನಗಳಲ್ಲಿ ಮಾಲು ಎತ್ತುವಳಿ ಮಾಡಬೇಕು.
   ಅ. ಟಿಂಬರ್, ಪೋಲ್ಸ್ ಆರ್ ಕೆ ಬಿಲೆಟ್ಸ್ ಗಳಿಗೆ ವ್ಯಾಟ್ ಶೇ. 12.5
   ಆ. ಎಫ್ ಡಿ ಟಿ ಶೇ. 8 ಇತರೆಯವರಿಗೆ ಶೇ. 12 ಕೈಗಾರಿಕೆಗಳಿಗೆ.
   ಇ. ಆದಾಯ ತೆರಿಗೆ ಶೇ. 2.5 ಮೌಲ್ಯ ವ್ಯಾಟ್ ಮತ್ತು ಎಫ್ ಡಿ ಟಿ ಸೇರಿ ಒಟ್ಟು ಮೊತ್ತದ ಮೇಲೆ.
   ಈ. ಸರ್ ಚಾರ್ಜ ಶೇ. 2.5 ಆದಾಯ ತೆರಿಗೆ ಮೇಲೆ.
   ಉ. ಎಜುಕೇಷನ್ ಸೆಸ್ ಶೇ. 2 ಆದಾಯ ತೆರಿಗೆ ಮತ್ತು ಸರ್ ಚಾರ್ಜ ಮೇಲೆ.
3. ಹರಾಜಿನಲ್ಲಿ ಭಾಗವಹಿಸುವ ಬಿಡ್ಡುದಾರರು ಠೇವಣಿ ಕಟ್ಟುವ ಮೊದಲು ಚುನಾವಣಾಧಿಕಾರಿಗಳು ನೀಡಿರುವ ಗುರುತಿನ ಚೀಟಿ ಅಥವಾ ಆಹಾರ ಪಡಿತರ ಚೀಟಿ ಅಥವಾ ಡ್ರೈವಿಂಗ್ ಪರವಾನಿಗೆ ಇವುಗಳಲ್ಲಿ ಯಾವುದಾದರೂ ಒಂದು ಗುರುತಿನ ಚೀಟಿ ಹಾಜರುಪಡಿಸತಕ್ಕದ್ದು.
4. ಇತರೆ ಹೆಚ್ಚಿನ ಷರತ್ತುಗಳನ್ನು ಕಛೇರಿಯಿಂದ ಅಥವಾ ಸಂಬಂಧಪಟ್ಟ ಡಿಪೋ ವಲಯ ಅರಣ್ಯಾಧಿಕಾರಿಯವರ ಕಛೇರಿಯಿಂದ ಪಡೆಯಬಹುದಾಗಿದೆ.

ಉಪ ಅರಣ್ಯ ಸಂರಕ್ಷಣಾಧಿಕಾರಿ,
ಭದ್ರಾವತಿ ವಿಭಾಗ, ಭದ್ರಾವತಿ.

ಪಿ.ಆರ್. 277

**POLICE DEPARTMENT**

**Office of the, Superintendent of Police, Bijapur**

**FORM-I**

**(See Rule 9)**

**NOTIFICATION**

Smt **Rekha Ambaji Dhumale,** working WHC-1418 in the **POLICE** Department of / office of the Superintendent of Police, Bijapur District is permitted to change her Name to **Rekha Vinay Asalkar**

Superindent of Police,
Bijapur.

P.D. 40

**ನಗರಸಭಾ ಕಾರ್ಯಾಲಯ, ತುಮಕೂರು**

**"ಟೆಂಡರ್ ಅವಧಿ ವಿಸ್ತರಣೆಯ ಅಧಿಸೂಚನೆ"**

**ಸಂಖ್ಯೆ:ನಸತು/(ಪಅ)/ನಿನ/ಸಿಆರ್177/2007–08, ದಿನಾಂಕ: 17ನೇ ಏಪ್ರಿಲ್ 2008**

ಈ ಕಛೇರಿಯ ಸಮಸಂಖ್ಯೆ ದಿನಾಂಕ 31.03.2008ರ ಮೂಲಕ 3 ಪ್ಯಾಕೇಜ್‌ಗಳ ಬೀದಿಕಸ ಗುಡಿಸುವುದು, ಕಟ್ಟಡದ ಭಗ್ನಾವಶೇಷಗಳನ್ನು ಸಾಗಿಸುವ ಕಾಮಗಾರಿಗಳಿಗೆ ಕರೆಯಲಾಗಿರುವ ಟೆಂಡರ್‌ನ ದಿನಾಂಕಗಳನ್ನು ಈ ಕೆಳಕಂಡಂತೆ ವಿಸ್ತರಿಸಲಾಗಿರುತ್ತದೆ.

ಪ್ರಸ್ತಾವನೆ ದಸ್ತಾವೇಜಿಗಾಗಿ ಕೋರಿಕೆಯನ್ನು ಸ್ವೀಕರಿಸಲು ಹಾಗೂ ಪ್ರಸ್ತಾವನೆಯನ್ನು ಸಲ್ಲಿಸಲು ಕೊನೆಯ ದಿನಾಂಕ:02.05.2008 ಮತ್ತು 03.05.2008 ಇರುವ ಅವಧಿಯನ್ನು ಕ್ರಮವಾಗಿ ದಿನಾಂಕ 14.05.2008 ಹಾಗೂ 15.05.2008 ಕ್ಕೆ ವಿಸ್ತರಿಸಲಾಗಿದೆ.

ಪೌರಾಯುಕ್ತರು,
ನಗರಸಭೆ, ತುಮಕೂರು.

ಪಿ.ಡಿ. 47